# ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ ಅಧ್ಯಯನ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ರೇವ್ಯಾ ಗೋವಿಂದ ನಾಯ್ಕ್

ಮಾರ್ಗದರ್ಶಕರು
ಡಾ. ಸಿ.ಎಸ್.ವಾಸುದೇವನ್
ಪ್ರವಾಚಕರು



ಸಮಾಜವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮-೦೯



# ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ ಅಧ್ಯಯನ

(ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)

ಸಂಶೋಧಕ
ರೇವ್ಯಾ ಗೋವಿಂದ ನಾಯ್ಕ್

ಮಾರ್ಗದರ್ಶಕರು
ಡಾ. ಸಿ.ಎಸ್.ವಾಸುದೇವನ್
ಪ್ರವಾಚಕರು





ಸಮಾಜವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೮-೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

"ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ" ಎಂಬ ಸಂಪ್ರಬಂಧವು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ರೇವ್ಯಾ ಗೋವಿಂದ ನಾಯ್ಕ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

C. S. Vasudevan

(ಡಾ. ಸಿ.ಎಸ್.ವಾಸುದೇವನ್)

ಪ್ರವಾಚಕರು ಮತ್ತು ಮಾರ್ಗದರ್ಶಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 14.10.2009

ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

"ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ" ಎಂಬ ಸಂಪ್ರಬಂಧವನ್ನು ಡಾ.ಸಿ.ಎಸ್.ವಾಸುದೇವನ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ರೇವ್ಯಾ ಗೋವಿಂದ ನಾಯ್ಕ್)
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 14/10/2009
ಸ್ಥಳ : ವಿದ್ಯಾರಣ್ಯ

# ಪರಿವಿಡಿ

**ಅಧ್ಯಾಯ ಒಂದು – ಪ್ರಸ್ತಾವನೆ**

ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ ಮತ್ತು ವಿಧಾನಗಳು

**ಅಧ್ಯಾಯ ಎರಡು – ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ**

* ಭೌಗೋಳಿಕ ಪರಿಸರ ಮತ್ತು ಪ್ರಾಗತಿಹಾಸ
* ಇತಿಹಾಸ ಆರಂಭದಿಂದ ೧೦ನೆಯ ಶತಮಾನದವರೆಗೆ
* ೧೦ನೆಯ ಶತಮಾನದಿಂದ ಆಧುನಿಕ ಇತಿಹಾಸದವರೆಗೆ

**ಅಧ್ಯಾಯ ಮೂರು – ಯಾದಗಿರಿ ಪರಿಸರದ ದೇವಾಲಯಗಳು**

* ದೇವಾಲಯ ವಾಸ್ತುಶಿಲ್ಪ
* ಮೂರ್ತಿಶಿಲ್ಪ
* ಶಾಸನಗಳು

**ಅಧ್ಯಾಯ ನಾಲ್ಕು – ರಕ್ಷಣಾ ವಾಸ್ತುಶಿಲ್ಪ ಮತ್ತು ನೀರಾವರಿ ವ್ಯವಸ್ಥೆ**

* ಕೋಟೆಗಳು
* ಕೆರೆಗಳು
* ನೀರಾವರಿ ವ್ಯವಸ್ಥೆ

**ಅಧ್ಯಾಯ ಐದು – ಸಮಾರೋಪ**

* ಗ್ರಂಥಸೂಚಿ
* ಛಾಯಾಚಿತ್ರ
* ತಳ ನಕ್ಷೆಗಳು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

ಭಾರತದ ಇತಿಹಾಸವನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ದೇಶಕ್ಕೆ ದೀರ್ಘಕಾಲದ ಸಂಸ್ಕೃತಿಯ ಸಮೃದ್ಧವಾದ ಪರಂಪರೆ ಇದೆ. ಇತಿಹಾಸವೆಂದರೆ ಕೇವಲ ಭೂತಕಾಲದ ಸಂಗತಿಗಳಲ್ಲ. ಅದು ಮನುಷ್ಯ ಜೀವನದ ಅರಿವು ಮತ್ತು ಅನುಭವಗಳನ್ನು ಒಂದಕ್ಕೊಂದು ಬೆಸೆದುಕೊಡುವುದೇ ಇತಿಹಾಸವಾಗಿದೆ. ಒಂದು ನಾಡಿನ ಇತಿಹಾಸವೆಂದರೆ ಅಲ್ಲಿನ ರಾಜರ ಬದುಕಿನ ಸಮಸ್ತ ಜನಸಮೂಹ, ಈ ಜನಗಳ ಮಹತ್ವವಾದ ಜೀವನ ಚಿತ್ರಣವೇ ಇತಿಹಾಸ. ಇಂತಹ ಜನತೆಯ ಇತಿಹಾಸದೊಂದಿಗೆ ಚರಿತ್ರೆಯೊಂದಿಗೆ ಅವರ ಚಾರಿತ್ರಿಕ ಅಂಶಗಳು ಹೇರಳವಾಗಿ ದೊರೆಯುತ್ತವೆ. ಹೀಗಿದ್ದರೂ ರಚನೆಯ ದೃಷ್ಟಿಯಿಂದ ಕಡಿಮೆ ಎಂದೇ ಹೇಳಬೇಕು. ಪ್ರಾದೇಶಿಕವಾಗಿ ಚರಿತ್ರೆಗೆ ಸಂಬಂಧಿಸಿದಂತೆ ಸಾಕಷ್ಟು ಕೃತಿಗಳು ಹೊರ ಬರಬೇಕಾಗಿದೆ.

ಪ್ರಾಚೀನ ಕಾಲದಿಂದಲೂ ಕನ್ನಡ ನಾಡು ರಾಜಕೀಯ ಮತ್ತು ಚಾರಿತ್ರಿಕವಾದ ಅಂಶಗಳಿಂದ ಕೂಡಿದ್ದುದ್ದಾಗಿದೆ. ಪ್ರಾಚೀನ ಶಿಲಾಯುಗ ಸಂಸ್ಕೃತಿಯಿಂದ ಹಿಡಿದುಕೊಂಡು ಇಂದಿನ ಪ್ರಸ್ತುತ ಬದುಕಿನವರೆಗೆ ತನ್ನತನವನ್ನು ಉಳಿಸಿ ಬೆಳಿಸಿಕೊಂಡು ಬಂದಿದೆ. ಇಲ್ಲಿ ಅನೇಕ ಧರ್ಮಗಳು ನೆಲೆ ನಿಂತಿವೆ ಮತ್ತು ದೇವಾಲಯಗಳು ಆಯಾ ನಾಡಿನ ಚರಿತ್ರೆಯನ್ನು ಪ್ರತಿಬಿಂಬಿಸುತ್ತವೆ. ಈ ರೀತಿಯಲ್ಲಿ ನಾವು ಯಾದಗಿರಿ ಪರಿಸರವನ್ನು ನೋಡಿದಾಗ ಇತಿಹಾಸ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಯಾದಗಿರಿ ತನ್ನದೇ ಆದ ಮಹತ್ವ ಸ್ಥಾನ ಹೊಂದಿದೆ. ಈ ಪರಿಸರವು ಭೀಮಾ ನದಿಯ ದಡಕ್ಕೆ ಇರುವುದರಿಂದ ಪ್ರಾಚೀನ ಶಿಲಾಯುಗದ ಸಂಸ್ಕೃತಿ ಅನೇಕ ನೆಲೆಗಳು ಹೊಂದಿದೆ. ನಂತರ ಪ್ರಾಚೀನ ಅರಸು ಮನೆತನಗಳಾದ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಹಾಗೂ ಕಲಚೂರಿ ಅರಸರು, ವಿಜಯನಗರದ ಅರಸರು ಮತ್ತು ಬಹುಮನಿ ಸುಲ್ತಾನರು, ಹೈದ್ರಾಬಾದಿನ ನಿಜಾಮರ ಆಡಳಿತಕ್ಕೆ ಒಳಪಟ್ಟ ಯಾದಗಿರಿಯು ಸ್ಮಾರಕಗಳು, ಕೋಟೆಗಳು ಮತ್ತು ಶಾಸನಗಳನ್ನು ಹೊಂದಿದೆ.

ಈ ಪರಿಸರವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ರಾಜಧಾನಿಯಾಗಿತ್ತು ಎಂದೂ ಶಾಸನದಿಂದ ತಿಳಿದುಬರುತ್ತದೆ. ಶಾಸನದಲ್ಲಿ ಯಾದಗಿರಿಯನ್ನು ಏತಗಿರಿ ಎಂದೂ ಉಲ್ಲೇಖಿತವಾಗಿದೆ.

ಯಾವುದೇ ಸ್ಥಳದ ಇತಿಹಾಸ ಮತ್ತು ಸಂಸ್ಕೃತಿಯು ಅಲ್ಲಿನ ಭೌಗೋಳಿಕ ಅಂಶಗಳ ಪ್ರಭಾವಕ್ಕೊಳಗಾಗಿರುತ್ತದೆ. ಭೀಮಾ ನದಿಯ ಎಡದಂಡೆಯ ಮೇಲಿರುವ ಬಯಲು ಸೀಮೆಯ ನಾಡಾದ ಕಲಬುರ್ಗಿ ಜಿಲ್ಲೆಯ ಪ್ರಮುಖ ತಾಲ್ಲೂಕು ಈ ಯಾದಗಿರಿ ಪಟ್ಟಣವು ಜಿಲ್ಲೆಯಲ್ಲಿಯ ಅತಿ ದೊಡ್ಡ ತಾಲ್ಲೂಕಾಗಿದೆ. "ಈ ಪರಿಸರವು ವಿಸ್ತೀರ್ಣದಲ್ಲಿ ೧.೨೮೯ ಚ.ಕೀ.ಗಳಿದ್ದು, ೧೭೧೦೭೩ ಹೇಕ್ಟೆರ್‌ಗಳಷ್ಟು ವಿಸ್ತಾರವಾದ ಭೂ ಪ್ರದೇಶವನ್ನು ಹೊಂದಿದೆ."[೧] ಬಹುಪಾಲು ಪ್ರದೇಶವು ಕೆಂಪು ಮಿಶ್ರಿತ ಕಪ್ಪು ಭೂಮಿ ಹೊಂದಿದ್ದು, ಕೃಷಿ ಮತ್ತು ಕೈಗಾರಿಕಾ ಚಟುವಟಿಕೆಗಳಿಗೆ ಸಹಾಯಕವಾಗಿದೆ.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಶೀರ್ಷಿಕೆಯ ಪ್ರಬಂಧವು ಯಾದಗಿರಿಯ ಪರಿಸರ ಚರಿತ್ರೆ ಮತ್ತು ಪುರಾತತ್ವ ಎಂಬುದಾಗಿದ್ದು, ಯಾದಗಿರಿ ಪರಸರದಲ್ಲಿ ಕಾಲದಲ್ಲಿದಂತಹ ಕೆಲವೊಂದು ಚಾರಿತ್ರಿಕ ಕುರುಹುಗಳನ್ನು ಕಾಣಬಹುದಾಗಿದೆ. ಇಂತಹ ಅವಶೇಷಗಳನ್ನು ಮುಖ್ಯವಾಗಿ ಭೀಮಾ ನದಿಯ ಪರಿಸರದಲ್ಲಿ ಕಾಣುತ್ತೇವೆ. ಸಿಕ್ಕಿರುವ ಅವಶೇಷಗಳನ್ನು ಗಮನಿಸಿ ಹೇಳುವುದಾದರೆ ಈ ಪ್ರದೇಶದ ಸಾಂಸ್ಕೃತಿಕ ಪ್ರಗತಿಯ ಮೇಲಾದ ಪ್ರಭಾವವನ್ನು ತಿಳಿಯಬಹುದು. ಶಿಲಾಯುಗ ಹಾಗೂ ಚಾರಿತ್ರಿಕ ಕಾಲಘಟ್ಟದಲ್ಲಿ ಮಹತ್ವದ ಪಾತ್ರ ವಹಿಸಿದ ಅನೇಕ ನೆಲೆಗಳು ಈ ಪ್ರದೇಶದಲ್ಲಿವೆ. ಉದಾಹರಣೆಗೆ "ಈ ಪರಿಸರದ ಕೋಲೂರು, ಕೊಂಡಾಪುರ, ಗುರುಮಿಟಕಲ್, ಯಾದಗಿರಿ, ಯಡಿಹಳ್ಳಿ, ರಾಚನಹಳ್ಳಿ ಮತ್ತು ಸಾಂಗ್ವರ"[೨] ಎಂಬ ಸ್ಥಳಗಳಲ್ಲಿ ಪ್ರಾಗೈತಿಹಾಸ ಕಾಲದಿಂದಲೂ ಮಾನವನ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಕುರುಹುಗಳು ಈ ಪರಿಸರದಲ್ಲಿ ಲಭ್ಯವಾಗಿವೆ. ಇವುಗಳ ಬಗೆಗೆ ಕೆಲವು ವರದಿಗಳು ಪ್ರಕಟವಾಗಿದ್ದು, ಅವುಗಳಲ್ಲಿ ಕೆಲವೇ ಕೆಲವು ನೆಲೆಗಳನ್ನು ಮಾತ್ರ ಕೇಂದ್ರೀಕರಿಸಿಕೊಳ್ಳಲಾಗಿದೆ. ಉದಾ: ಯಾದಗಿರಿ ಹಾಗೂ ಯಡ್ಡಳ್ಳಿ ಗ್ರಾಮಗಳಲ್ಲಿರುವ ಬೃಹತ್ ಶಿಲಾಯುಗ ಸಂಸ್ಕೃತಿ ಕುರುಹುಗಳನ್ನು ಕುರಿತು ಹೆಚ್ಚಿನ ಒತ್ತು ನೀಡಲಾಗಿದೆ. ಆದರೆ ಬೇರೆ ಬೇರೆ ಸಂಸ್ಕೃತಿ ಕುರುಹುಗಳನ್ನು ಹೊಂದಿರುವ ಹಲವು ನೆಲೆಗಳು ಈ ಪರಿಸರದಲ್ಲಿವೆ. ಅವುಗಳನ್ನು ಶೋಧಿಸುವ ಹಾಗೂ ವಿಶ್ಲೇಷಿಸುವ ಕಾರ್ಯ ಮಾಡಲಾಗುವುದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲ ಹೊಸ ನೆಲೆಗಳನ್ನು ಹುಡುಕಲಾಗಿದೆ. ಈಗಾಗಲೇ ನಡೆದಿರುವ ಕಾರ್ಯಗಳನ್ನು ಗಮನಿಸಿಕೊಂಡು ಅವುಗಳನ್ನು ವಿಸ್ತರಿಸುವ ಅಧ್ಯಯನವನ್ನು ಕೈಗೊಳ್ಳಲಾಗುವುದು ಹಾಗೂ ಅವನ್ನು ಒಂದು ಶಿಸ್ತುಬದ್ಧ ಅಧ್ಯಯನದ ಚೌಕಟ್ಟಿಗೆ ಒಳಪಡಿಸಿ ಅರಿತುಕೊಳ್ಳುವ ಅವಶ್ಯಕತೆ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗುವುದು.

ಯಾದಗಿರಿ ಪರಿಸರದಲ್ಲಿ ಬೃಹತ್ ಶಿಲಾಯುಗ ಕಾಲಾವಧಿಗೆ ಸಂಬಂಧಿಸಿದ ಅತಿ ಮಹತ್ವದ ಕುರುಹು ಕುರಿತು ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರು ಕೈಗೊಂಡಿರುವ ಅಧ್ಯಯನಗಳು ಕೇವಲ ಯಾದಗಿರಿ, ರಾಚನಹಳ್ಳಿ, ಯಡ್ಡಳ್ಳಿ, ಕೋಂಡಾಪೂರ, ಗುರುಮಿಟ್‌ಕಲ್ ಮತ್ತು ಸ್ವಾಂಗಾವ ನೆಲೆಗಳನ್ನು ಮಾತ್ರ ಕೇಂದ್ರಿಕರಿಸಿಕೊಂಡು ನಡೆದಿರುವಂತಹವು. ಇದೇ ಬಗೆಯ ಕುರುಹುಗಳು ಈ ಪರಿಸರದ ಬೇರೆ ಬೇರೆ ಸ್ಥಳಗಳಲ್ಲಿ ವಿಸ್ತರಿಸಿಕೊಂಡಿದ್ದು, ಅವನ್ನು ಪತ್ತೆಹಚ್ಚುವ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಒಳಪಡಿಸುವ ಕಾರ್ಯ ಮಾಡಬೇಕಾಗಿದೆ. ಅಂತಹ ಪ್ರಯತ್ನಗಳು ಇಲ್ಲಿರುವ ನೆಲೆಗಳ ಬಗೆಗೆ ಈಗಾಗಲೇ ಕೈಗೊಂಡ ಅಧ್ಯಯನಗಳು ವಿಸ್ತರಣೆ ಹಾಗೂ ಸಾಧ್ಯತೆಗಳ ಕುರಿತು ಹೆಚ್ಚಿನ ಗಮನ ಹರಿಸಬೇಕಾದ ಅವಶ್ಯಕತೆ ಇದೆ.

ಈ ಪರಿಸರದ ಚಾರಿತ್ರಿಕ ಅಂಶಗಳ ಕುರಿತಾಗಿ ಹಲವು ಬಿಡಿ ಬಿಡಿಯಾದ ಅಧ್ಯಯನಗಳು ನಡೆದಿವೆ. ಅಂತಹ ಅಧ್ಯಯನಗಳು ಸಾಹಿತ್ಯ ಅಧ್ಯಯನಾಸಕ್ತಿಯ ಹಿನ್ನೆಲೆಯಲ್ಲಿ ನಡೆದಿರುವಂತಹವು. ದೇವಾಲಯ, ಸ್ಮಾರಕಗಳು, ಕೋಟೆಗಳ ಕುರಿತು ಒಂದೆರಡು ಸಣ್ಣಪುಟ್ಟ ಲೇಖನಗಳು ಪ್ರಕಟವಾಗಿದ್ದನ್ನು ಹೊರತುಪಡಿಸಿದರೆ, ಸಮಗ್ರ ಹಾಗೂ ಸೂಕ್ಷ್ಮ ನೆಲೆಯಲ್ಲಿ ಅಧ್ಯಯನಗಳು ನಡೆದಿರುವುದು ಅತ್ಯಂತ ಕಡಿಮೆ ಎಂದೂ ಹೇಳಬಹುದು. ಇಂತಹ ಕೊರತೆಯನ್ನು ತುಂಬಿಕೊಡುವ ನಿಟ್ಟಿನಲ್ಲಿ ಚಾರಿತ್ರಿಕ ಕಾಲಘಟ್ಟದ ಶಾಸನ ವಿವರಗಳು ಹಾಗೂ ಈ ಪರಿಸರದಲ್ಲಿ ಕಂಡುಬರುವ ಎಲ್ಲಾ ಬಗೆಯ ಅವಶೇಷಗಳನ್ನು ವಿವರಿಸುವ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಅವನು ಮರುರೂಪಿಸುವ ಪ್ರಯತ್ನ ಮಾಡಲಾಗುವುದು. ಹಿಂದೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನವನ್ನು ವಿಸ್ತರಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಈ ಪರಿಸರದಲ್ಲಿ ಪ್ರಾಚೀನ ಇತಿಹಾಸ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಕಟ್ಟಿಕೊಡುವ ಮಹತ್ವದ ಆಕಾರಗಳಾದ ದೇವಾಲಯಗಳು, ಸ್ಮಾರಕಗಳು, ಕೋಟೆಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಬೇರೆ ಬೇರೆ ಸಂಗತಿಗಳು ಸಾಕಷ್ಟಿವೆ. ಜೊತೆಗೆ ಇಲ್ಲಿನ ದೇವಾಲಯಗಳು ವಾಸ್ತುಶಿಲ್ಪಗಳ ಅಧ್ಯಯನಕ್ಕೆ ಹೊಸ ಬಗೆಯ ವಿಷಯಗಳನ್ನು ಜೋಡಿಸುವ ಮಹತ್ವದ ಕುರುಹುಗಳಾಗಿವೆ. ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರುವ ದೇವಾಲಯಗಳನ್ನು ಕುರಿತು ನಡೆದ ಅಧ್ಯಯನಗಳು ಅತ್ಯಂತ ವಿರಳ. ಅಂತಹ ಮಹತ್ವದ ಸ್ಮಾರಕಗಳು ಹಾಗೂ ಇತರೆ ಅವಶೇಷಗಳನ್ನು ಕೇಂದ್ರೀಕರಿಸುವ ಹಾಗೂ ವಿಶ್ಲೇಷಿಸುವ ಕಾರ್ಯ ಮಾಡಲಾಗುವುದು.

ಈ ಪರಿಸರದಲ್ಲಿರುವ ಹಲವಾರು ದೇವಾಲಯಗಳು ಪ್ರಾಚೀನ ಸಂಸ್ಕೃತಿಯ ಪ್ರತೀಕಗಳಾಗಿವೆ. ಅವು ಕೇವಲ ಧಾರ್ಮಿಕ ಆರಾಧನಾ ಕೇಂದ್ರಗಳಾಗಿರದೆ ಅಂದಿನ ಕಾಲದ ಶಿಕ್ಷಣ ಕೇಂದ್ರವಾಗಿತ್ತೆಂದು

ಶಾಸನದಿಂದ ತಿಳಿದುಬರುತ್ತದೆ. ಇವುಗಳಲ್ಲಿ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳು ಈ ಭಾಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆನ್ನುವುದರಲ್ಲಿ ಯಾವ ಸಂಶಯವಿಲ್ಲ. ಇಂತಹ ವಿಷಯಗಳನ್ನು ಅವಶ್ಯಕತೆಗೆ ತಕ್ಕಂತೆ ವಿವೇಚಿಸುವ ಪ್ರಯತ್ನ ಮಾಡಲಾಗುವುದು.

ಒಟ್ಟಿನಲ್ಲಿ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರಗಳಲ್ಲಿ ಉಪೇಕ್ಷೆಗೆ ಒಳಗಾಗಿರುವ ಈ ಪರಿಸರವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಗಳಿಗೆ ಒಳಪಡಿಸುವ ಮೂಲಕ ಇಲ್ಲಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಹಾಗೂ ಪುರಾತತ್ವ ಹಿನ್ನೆಲೆಯಲ್ಲಿ ಶಿಲಾಯುಗದ ನೆಲೆಯನ್ನು ಹುಡುಕುವ ಮತ್ತು ಚಾರಿತ್ರಿಕ ಸಂದರ್ಭಗಳಲ್ಲಿ ನಿರ್ಮಾಣವಾದ ಎಲ್ಲ ಬಗೆಯ ಸ್ಮಾರಕಗಳು ಕುರಿತು ಅಧ್ಯಯನ ಮಾಡುವ ಬಹುಮುಖ್ಯ ಉದ್ದೇಶವನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಯಾದಗಿರಿ ತಾಲೂಕಿನ ಸುತ್ತಮುತ್ತಲಿನ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡಿರುವ "ಈ ಪ್ರದೇಶವು ವಿಶಾಲವಾಗಿದ್ದು ೮ ಹೋಬಳಿಗಳು ಮತ್ತು ೧೪೪ ಹಳ್ಳಿಗಳನ್ನು ಒಳಗೊಂಡಿದೆ."[३] ಈ ಪ್ರದೇಶದಲ್ಲಿ ಹರಿಯುವ ಪ್ರಮುಖ ನದಿಯಾದ ಭೀಮಾ ನದಿಯ ಪರಿಸರದ ಬಗ್ಗೆ ಅಧ್ಯಯನ ಮಾಡಲಾಗುವುದು. ಈ ಅಧ್ಯಾಯದಲ್ಲಿ ಭೌಗೋಳಿಕವಾದ ಪರಿಸರವನ್ನು ಗುರುತಿಸಿ ಕೊಳ್ಳಲಾಗುವುದು. ಅಂದರೆ ಯಾದಗಿರಿ ಮತ್ತು ಗುರುಮಿಟಕಲ್ ಈ ವ್ಯಾಪ್ತಿಯಲ್ಲಿ ಬರುತ್ತದೆ.

ಅಧ್ಯಯನವನ್ನು ಸಂಪೂರ್ಣ ಕ್ರಮಬದ್ಧವಾಗಿ ಮಾಡುವುದಕ್ಕೆ ಯಾದಗಿರಿ ಮತ್ತು ಗುರುಮಿಟಕಲ್ ಹೋಬಳಿಯನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಹೋಬಳಿಯಲ್ಲಿ ೪೦ ಗ್ರಾಮಗಳು (ಯಾದಗಿರಿ ೨೪ ಮತ್ತು ಗುರುವಿನಕಲ್ ೧೬) ಒಳಗೊಂಡಿರುತ್ತವೆ. ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ಪ್ರಮುಖವಾದ ರಾಮಸಮುದ್ರ, ಯಡ್ಡದಳ್ಳಿ, ಯಾದಗಿರಿ, ಮುದ್ನಾಳ, ಯರಗೋಳ, ಅರಕೊಹಿಕೆ, ಮೈಲಾರಪೂರ, ಹಳಗೇರಾ, ವರ್ಕನಳ್ಳಿ, ಮುಂಡರಗಿ, ಗಾಜರಕೋಟೆ, ಚಂಪ್ರಕಿ, ಗುರುಮಿಟಕಲ್, ಬೊರಬಂಡಾ, ಮಟ್ಟಪಾಗ ಕುದಕೂರು, ಎಲ್ಹೆರಿ, ಮತ್ತು ಸ್ವಾಂಗಾರ ಮುಂತಾದ ಗ್ರಾಮಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರಸ್ತುತ ಅಧ್ಯಯನ ಶಿಲಾಯುಗದ ಸಂಸ್ಕೃತಿಯಿಂದ ಹೈದ್ರಾಬಾದಿನ ನಿಜಾಮರ ಆಡಳಿತದವರೆಗೆ ಕೈಗೊಳ್ಳಲಾಗುವುದು. ಪರಿಸರ ಮತ್ತು ಪುರಾತತ್ವ ಹಿನ್ನೆಲೆಯ ಈ ಅಧ್ಯಯನವು ಪ್ರಾಗೈತಿಹಾಸದ ನೆಲೆಗಳು ಹಾಗೂ ಅವುಗಳ ವಿವರ ಸಂಕ್ಷಿಪ್ತವಾಗಿ ವಿವರಿಸಲಾಗುವುದು. ಮತ್ತು ಪುರಾತತ್ವದ ಮೂಲಾಧಿಗಳಾದ ದೇವಾಲಯ, ಮೂರ್ತಿಶಿಲ್ಪ, ಶಾಸನಗಳಿಗೆ ಮತ್ತು ಚಾರಿತ್ರಿಕ ಹಿನ್ನೆಲೆಯ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುವುದು.

ಯಾದಗಿರಿ ಪರಿಸರದ ಬಗ್ಗೆ ಕೈಗೊಳ್ಳುವ ಅಧ್ಯಯನ ವಿಷಯ ವ್ಯಾಪ್ತಿಯಲ್ಲಿ ಐದು ಪ್ರಮುಖ ಅಧ್ಯಾಯಗಳಾಗಿವೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಪ್ರಸ್ತಾವನೆ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಈ ಪರಿಸರವನ್ನು ಕುರಿತು ಈ ಹಿಂದೆ ಕೈಗೊಂಡಿರುವ ಅಧ್ಯಯನದ ಹಿನ್ನೆಲೆಯಲ್ಲಿ ವಿವರಿಸಲಾಗುವುದು.

ಎರಡನೆಯ ಅಧ್ಯಾಯದಲ್ಲಿ ಯಾದಗಿರಿ ಪರಿಸರದ ಭೌಗೋಳಿಕ ಸನ್ನಿವೇಶಗಳ ಕುರಿತು ಸಂಕ್ಷಿಪ್ತ ವಿವರ ನೀಡುವುದು ಪ್ರಾಗತಿಹಾಸದ ನೆಲೆಗಳನ್ನು ಗುರುತಿಸುವುದು ಮತ್ತು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಕಂಡುಬರುವ ಹೊಸ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗುವುದು. ಇತಿಹಾಸದ ಆರಂಭದಿಂದ ೧೦ನೆಯ ಶತಮಾನದವರೆಗೆ ಚರಿತ್ರೆಯನ್ನು ವಿವರಿಸಲಾಗುವುದು. ಹಾಗೂ ೧೦ನೆಯ ಶತಮಾನದಿಂದ ಆಧುನಿಕ ಇತಿಹಾದವರೆಗೆ ಚಾರಿತ್ರಿಕವಾಗಿ ಸಂಪೂರ್ಣ ವಿವರಣೆ ಮಾಡಲಾಗುವುದು.

ಮೂರನೆಯ ಅಧ್ಯಾಯದಲ್ಲಿ ಯಾದಗಿರಿ ಪರಿಸರದ ದೇವಾಲಯಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪ ಮತ್ತು ಶಾಸನಗಳ ಬಗ್ಗೆ ಕ್ರಮಬದ್ಧವಾಗಿ ಸಂಪೂರ್ಣ ಅಧ್ಯಯನ ಮಾಡಲಾಗುವುದು.

ನಾಲ್ಕನೆಯ ಅಧ್ಯಾಯದಲ್ಲಿ ರಕ್ಷಣಾ ವಾಸ್ತುಶಿಲ್ಪ ಮತ್ತು ನೀರಾವರಿ ವ್ಯವಸ್ಥೆಯಾಗಿದ್ದು ಈ ಪರಿಸರದ ಕೋಟೆಗಳ ಬಗ್ಗೆ ವಿವರಣೆ ಮಾಡಲಾಗುವುದು ಹಾಗೂ ಕೆರೆಗಳ ಬಗ್ಗೆ ಸಮಗ್ರ ಅಧ್ಯಯನ ಮಾಡಿ ವಿವರಿಸಲಾಗುವುದು ಮತ್ತು ಈ ಪರಿಸರದ ನೀರಾವರಿ ವ್ಯವಸ್ಥೆಯ ಬಗ್ಗೆ ಕ್ರಮಬದ್ಧವಾಗಿ ಅಧ್ಯಯನ ಮಾಡಿ ವಿವರಿಸಲಾಗುವುದು.

ಐದನೆಯ ಅಧ್ಯಾಯದಲ್ಲಿ ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವವನ್ನು ಕುರಿತು ಸಂಕ್ಷಿಪ್ತವಾಗಿ ಸಮಾರೋಪದಲ್ಲಿ ವಿವರಿಸಲಾಗುವುದು.

### ೧.೩. ಅಧ್ಯಯನದ ವಿಧಾನಗಳು

ಪ್ರಸ್ತುತ ಅಧ್ಯಯನ ಕೈಗೊಳ್ಳುತ್ತಿರುವ ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ ಕುರಿತು ಇದುವರೆಗೆ ನಡೆದಿರುವ ಸಂಶೋಧನೆಯನ್ನು ಪಟ್ಟಿ ಮಾಡಿ ತಜ್ಞ ವಿದ್ವಾಂಸರೊಂದಿಗೆ ಚರ್ಚಿಸಲಾಗುವುದು. ಈ ಅಧ್ಯಯನವು ಮುಖ್ಯವಾಗಿ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಕ್ಷೇತ್ರಕಾರ್ಯಕ್ಕೆ ಪೂರಕವಾಗುವಂತೆ ಗುಲಬರ್ಗಾ ಜಿಲ್ಲೆಯ ಗೆಜೆಟೀಯರ್ ಕನ್ನಡ ವಿಷಯ ವಿಶ್ವಕೋಶ ಮತ್ತು ಕಲಬುರ್ಗಿ ಜಿಲ್ಲಾ ದರ್ಶನ ಈ ಪರಿಸರವನ್ನು ಕುರಿತು ಪ್ರಕಟವಾಗಿರುವ ಲೇಖನಗಳು, ಕೃತಿಗಳು ಮತ್ರು ಶಾಸನಗಳು ವಿವಿಧ ವಿಶ್ವವಿದ್ಯಾಲಯಗಳ ಪ್ರಕಟಿತ ಗ್ರಂಥಗಳು

ಹಾಗೂ ಅಪ್ರಕಟಿತ ಗ್ರಂಥಗಳು, ಪತ್ರಿಕೆಗಳಲ್ಲಿ ವಿದ್ವಾಂಸರ ಪ್ರಕಟಿತ ಲೇಖನಗಳು ಹಾಗೂ ಸ್ಥಳೀಯರಿಂದ ಕೋಟೆ ಮತ್ತು ಸ್ಮಾರಕಗಳಿಗೆ ಸಂಬಂಧಿಸಿದ ಹೇಳಿಕೆಗಳನ್ನು ದಾಖಲಿಸಿ ಟಿಪ್ಪಣಿ ಮಾಡಿಕೊಂಡು ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕಾರಗಳಾಗಿ ಬಳಸಿಕೊಳ್ಳಲಾಗುತ್ತದೆ.

ಕ್ಷೇತ್ರಕಾರ್ಯ ಆಧಾರಿತವಾಗಿ ಅಧ್ಯಯನ ಆಯ್ಕೆ ಮಾಡಿಕೊಂಡಿರುವ ಯಾದಗಿರಿ ಮತ್ತು ಗುರುಮಿಟಕಲ್ ಹೋಬಳಿಯ ಪ್ರತಿ ಗ್ರಾಮಗಳಿಗೆ ಖುದ್ದಾಗಿ ಭೇಟಿ ನೀಡಿ ಅಲ್ಲಿನ ವಿವರವನ್ನು ನೇರವಾಗಿ ತಿಳಿದುಕೊಳ್ಳುವುದು ಮತ್ತು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬರುವ ಹೊಸ ನೆಲೆಗಳನ್ನು ಗುರುತಿಸುವುದು ಮತ್ತು ಅವಶೇಷಗಳನ್ನು ಸಂಗ್ರಹಿಸಿ ಛಾಯಾಚಿತ್ರ ತೆಗೆಯಲಾಗುವುದು. ಇಂತಹ ಆಕರಗಳನ್ನು ಕಾಲಾನುಕ್ರಮದಲ್ಲಿ ವಿಂಗಡಿಸಿ ವಿಮರ್ಶಿಸಿ ವಿಶ್ಲೇಷಿಸಲಾಗುವುದು. ಚರಿತ್ರೆ, ಪುರಾತತ್ವ, ಇತಿಹಾಸ, ಸಂಸ್ಕೃತಿ ಅಧ್ಯಯನಗಳಲ್ಲಿ ಚಾಲ್ತಿಯಲ್ಲಿರುವ ಅಧ್ಯಯನ ವಿಧಾನಗಳನ್ನು ಪರಿಗಣಿಸಿ ವಿಶ್ಲೇಷಿಸಲಾಗುವುದು ಹಾಗೂ ಅಧ್ಯಯನ ಪೂರೈಸುವ ಪ್ರಯತ್ನ ಮಾಡಲಾಗುವುದು.

### ೧.೪. ಈವರೆಗೆ ನಡೆದ ಅಧ್ಯಯನಗಳು

ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಪರಿಸರವನ್ನು ಕುರಿತು ಕೆಲವು ವಿದ್ವಾಂಸರು ಸಂಕ್ಷಿಪ್ತವಾಗಿ ಮಾತ್ರ ಸಂಶೋಧನೆಯನ್ನು ಮಾಡಿದ್ದಾರೆ. ಗುಲಬರ್ಗಾ ಜಿಲ್ಲೆಯ ಗ್ಯಾಸಟೀಯರಲ್ಲಿ ಈ ಪರಿಸರದ ಭೌಗೋಳಿಕವಾಗಿ ಭೂಮಿಯ ಮೇಲ್ಮೈ ಲಕ್ಷಣಗಳು ಜಲಸಂಪತ್ತು, ಪ್ರಾಣಿಸಂಪತ್ತು, ಸಸ್ಯಸಂಪತ್ತು ಮತ್ತು ಅರಣ್ಯಗಳು ಸ್ವಾಭಾವಿಕವಾಗಿ ವಿವರಿಸಲಾಗಿದೆ. ಡಿ.ಬಿ.ನಾಯಕ ಅವರ 'ಕಲಬುರ್ಗಿ ಜಿಲ್ಲಾ ದರ್ಶನ'ದಲ್ಲಿ ಈ ಪರಿಸರವನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಸಿ.ಎಸ್. ಪಾಟೀಲ್ ಅವರ 'ಕರ್ನಾಟಕದ ಕೋಟೆಗಳು' ಸಂಪುಟ–೧ರಲ್ಲಿ ಈ ಪರಿಸರದ ಕೋಟೆಗಳ ಬಗ್ಗೆ ಅಧ್ಯಯನ ಮಾಡಿ ವಿವರಿಸಲಾಗಿದೆ. ಮತ್ತು ಬಸವರಾಜು ಕೆ.ಆರ್. ಅವರ 'ಹಿಸ್ಟರಿ ಆಫ್ ಕರ್ನಾಟಕ' ಎಂಬ ಗ್ರಂಥದಲ್ಲಿ ಪ್ರಾಚೀನ ಕಾಲದ ಯಾದಗಿರಿಯ ಚರಿತ್ರೆಯನ್ನು ಕುರಿತು ವಿವರಿಸಲಾಗಿದೆ.

ಸಿದ್ಧಯ್ಯ ಕಲಾಲ ಅವರ 'ಯಾದಗಿರಿಯ ದೇವಾಲಯ ಲೇಖನ' ಎಂಬ ಕೃತಿಯಲ್ಲಿ ಈ ಪರಿಸರದ ದೇವಾಲಯಗಳ ಬಗ್ಗೆ ವಿವರಿಸಲಾಗಿದೆ. ಗವಿಸಿದ್ಧಪ್ಪ ಅವರ 'ಕುಕನೂರು ಒಂದು ಸಾಂಸ್ಕೃತಿಕ ಅಧ್ಯಯನ'ದಲ್ಲಿ ಈ ಪರಿಸರದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ ಹಾಗೂ ಹನುಮಾಕ್ಷಿ ಗೋಗಿಯವರ 'ಅನುಶಾಸನ' ಯಾದಗಿರಿ ತಾಲ್ಲೂಕಿನ ಅಪ್ರಕಟಿತ ಶಾಸನದಲ್ಲಿ ಈ ಪರಿಸರದ ಶಾಸನಗಳ ಬಗ್ಗೆ ವಿವರಿಸಲಾಗಿದೆ. ಭೀಮರಾಯ ಲಿಂಗೇರಿಯವರ 'ಯಾದಗಿರಿಯ ಸಂಸ್ಕೃತಿ ಅಧ್ಯಯನ' ಎಂಬ ಅಪ್ರಕಟಿತ

ಗ್ರಂಥದಲ್ಲಿ ಈ ಪರಿಸರದ ಭೌಗೋಳಿಕ ಹಿನ್ನೆಲೆ ಸಾಮಾಜಿಕ ಜೀವನ, ಧಾರ್ಮಿಕ ಜೀವನ, ಆರ್ಥಿಕ ಜೀವನ ರಾಜಕೀಯವಾಗಿ ಮತ್ತು ಈ ಪರಿಸರದಲ್ಲಿ ನಡೆಯುವ ಜಾತ್ರೆ, ಹಬ್ಬಗಳು ಮತ್ತು ಹೈದ್ರಾಬಾದ್ ನಿಜಾಮನ ವಿರುದ್ಧ ನಡೆದಿರುವ ವಿಮೋಚನಾ ಚಳುವಳಿಯನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ರವಿಯವರ 'ಯಾದಗಿರಿ ಪರಿಸರದ ಮೋಹರಂ ಪದಗಳ ಅನನ್ಯತೆ' ಎಂಬ ಅಪ್ರಕಟಿತ ಗ್ರಂಥದಲ್ಲಿ ಚಾರಿತ್ರಿಕ ಹಿನ್ನೆಲೆ ವಿವರಣೆ ಮಾಡಲಾಗಿದೆ. ಕೆಲವು ಪತ್ರಿಕೆಯಲ್ಲಿ ಈ ಪರಿಸರ ಕುರಿತು ಲೇಖನಗಳು ಪ್ರಕಟವಾಗಿವೆ.

**ಅಡಿಟಿಪ್ಪಣಿಗಳು:**

೧. ಗುಲಬರ್ಗಾ ಜಿಲ್ಲಾ ಗ್ಯಾಸಟೀಯರ್, ಪುಟ-೪

೨. ಶಿವತಾರನ್ ಕೆ.ಬಿ, ಕರ್ನಾಟಕದ ಪುರಾತತ್ವ ಶೋಧ, ಪುಟ-೨೦೫.

೩. ಭೀಮರಾಯ ಲಿಂಗೇರಿ, ಯಾದಗಿರಿ ಒಂದು - ಸಾಂಸ್ಕೃತಿಕ ಅಧ್ಯಯನ, ಪುಟ-೮

## ಅಧ್ಯಾಯ ಎರಡು

### ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ

೨.೧. ಭೌಗೋಳಿಕ ಪರಿಸರ ಮತ್ತು ಪ್ರಾಗೈತಿಹಾಸ

೨.೨. ಇತಿಹಾಸ ಆರಂಭದಿಂದ ೧೦ನೆಯ ಶತಮಾನದವರೆಗೆ

೨.೩. ೧೦ನೆಯ ಶತಮಾನದಿಂದ ಆಧುನಿಕ ಇತಿಹಾಸದವರೆಗೆ

## ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ

### ೨.೧. ಭೌಗೋಳಿಕ ಪರಿಸರ ಮತ್ತು ಪ್ರಾಗೈತಿಹಾಸ

ಯಾವುದೇ ಸ್ಥಳದ ಇತಿಹಾಸ ಮತ್ತು ಸಂಸ್ಕೃತಿ ಅಲ್ಲಿನ ಭೌಗೋಳಿಕ ಅಂಶಗಳ ಪ್ರಭಾವಕ್ಕೊಳಗಾಗಿರುತ್ತದೆ. ಭೀಮಾ ನದಿಯ ಎಡದಂಡೆಯ ಮೇಲಿರುವ ಬಯಲು ಸೀಮೆಯ ನಾಡಾದ ಕಲಬುರ್ಗಿ ಜಿಲ್ಲೆಯ ಪ್ರಮುಖ ತಾಲ್ಲೂಕು ಹಾಗೂ ಪಟ್ಟಣ ಯಾದಗಿರಿ ಪರಿಸರವು ಗುಲಬರ್ಗಾ ಜಿಲ್ಲೆಯಲ್ಲಿಯೇ ಅತಿದೊಡ್ಡ ತಾಲ್ಲೂಕಾಗಿದೆ. "ತಾಲೂಕಿನ ವಿಸ್ತಿರ್ಣ ೧.೨೦೯ ಚ.ಕೀ.ಮೀಟರಗಳಿದ್ದು, ೧.೭೧.೦೭೩ ಹೆಕ್ಟೇರಗಳಷ್ಟು ವಿಸ್ತಾರದಿಂದ ಭೂ ಪ್ರದೇಶ ಹೊಂದಿದೆ. ಜಿಲ್ಲೆಯ ಅತ್ಯಂತ ಹೆಚ್ಚಿನ ಅರಣ್ಯ ಪ್ರದೇಶವು ೨೩.೮೮೧ ಹೆಕ್ಟೇರ್‌ಗಳಷ್ಟು ಈ ತಾಲ್ಲೂಕಿನಲ್ಲಿದೆ ಎಂಬ ದಾಖಲೆಯಾಗಿದೆ."[೧]

"ಸಮುದ್ರ ಮಟ್ಟದಿಂದ ೩೦೦ರಿಂದ ೮೦೦ ಮಿ.ಮೀ. ಅಡಿ ಎತ್ತರದಲ್ಲಿರುವ ಯಾದಗಿರಿಯನ್ನು ಭೂಪ್ರದೇಶದಲ್ಲಿ ಉತ್ತರ ಅಕ್ಷಾಂಶ ೭೬೦-೫೮ ಅಂಶ ಹಾಗೂ ಪೂರ್ವ ರೇಖಾಂಶ ೧೬೦.೨೭ ಡಿಗ್ರಿ ಮತ್ತು ನಿಮಿಷಗಳಲ್ಲಿ ಗುರುತಿಸಬಹುದು."[೨] "ಈ ತಾಲ್ಲೂಕಿನ ಮಳೆ ಪ್ರಮಾಣ ೭೩೨.೮ ಮಿ.ಮೀ.ಗಳಿದ್ದು, ೧೯೯೧ರ ಜನಗಣತಿಯ ಪ್ರಕಾರ ತಾಲ್ಲೂಕಿನ ಒಟ್ಟು ಜನಸಂಖ್ಯೆ ೨.೭೪.೦೮೨ ಇದೆ."[೩] ಇತ್ತೀಚಿನ ಅಂದಾಜಿನಂತೆ ೩ ಲಕ್ಷಕ್ಕೂ ಹೆಚ್ಚು ಮೀರಿದೆ. ಯಾದಗಿರಿ ತಾಲ್ಲೂಕಿನ ಪ್ರಮುಖ ಗ್ರಾಮಗಳಾದ ರಾಮಸಮುದ್ರ, ಬಳಿಚಕ್ರ, ಹತ್ತಿತುಂಗಿ, ಸೈದಾಪುರ, ಯರಗೋಳ, ಗುರುಮಿಟಕಲ್, ಗಾಜರಕೋಟೆ, ಚಂಪ್ರರೆ ಒಟ್ಟು ೮ ಹೋಬಳಿಗಳು ಮತ್ತು ೧೪೪ ಹಳ್ಳಿಗಳನ್ನು ಒಳಗೊಂಡಿದೆ. ತಾಲ್ಲೂಕಿನ ಪೂರ್ವದಲ್ಲಿ ಆಂಧ್ರ ಪ್ರದೇಶದ ಕೊಡಂಗಲ್, ದಕ್ಷಿಣ ದಿಕ್ಕಿನಲ್ಲಿ ಆಂಧ್ರ ಪ್ರದೇಶದ ಮುಕ್ತಂ ಗಡಿ ಇದ್ದು, ಉತ್ತರಕ್ಕೆ ಚಿತ್ತಾಪೂರ ಸೇಡಂ ತಾಲ್ಲೂಕುಗಳಿದ್ದು ಪಶ್ಚಿಮ ಭಾಗದಲ್ಲಿ ನಿರಂತರವಾಗಿ ಹರಿಯುತ್ತಿರುವ ಭೀಮಾ ನದಿ ಹಾಗೂ ಶಹಾಪೂರ ತಾಲ್ಲೂಕು ಗಡಿಯನ್ನೇ ಹೊಂದಿದೆ.

ಭೂಮಿಯ ಮೇಲ್ಮೈ ಲಕ್ಷಣಗಳಲ್ಲಿ ಈ ಪರಿಸರದ ಬಹುಪಾಲು ಪ್ರದೇಶವು ಕೆಂಪು, ಕಪ್ಪು ಮತ್ತು ಮಿಶ್ರಿತ ಭೂಮಿ ಇದ್ದು ನೆಲ ಸಮತಟ್ಟಾಗಿ ಏರುತಗ್ಗುಗಳಿಂದ ಕೂಡಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಎತ್ತರವಿಲ್ಲದ ಬೆಟ್ಟಗಳಿಲ್ಲದಿದ್ದರೂ ಈ ಪರಿಸರದಲ್ಲಿ ಎತ್ತರವಾದ ಬೆಟ್ಟದ ಸಾಲುಗಳು ಸುಮಾರು ೨೧ ಕೀ.ಮೀ. ದೂರ ಸಾಗಿ ಸೇಡಂ ತಾಲ್ಲೂಕಿನಲ್ಲಿ ಕೊನೆಗೊಂಡಿದೆ. ತಾಲ್ಲೂಕಿನ ಕೆಲವು ಕಡೆ ಬಿಳಿ ಶಿಲೆಯ ಬೆಣಚು ಕಲ್ಲುಗಳು ಅತಿ ಹೆಚ್ಚು ಕಂಡುಬರುತ್ತವೆ. ಹಾಗಾಗಿ ಈ ಪರಿಸರದ ಯಾವುದೇ ಭಾಗದಲ್ಲಿ ಖನಿಜಗಳು ಹೇರಳವಾಗಿ ಲಭಿಸುವುದಿಲ್ಲ. ಸಾಗುವಳಿಗೆ ಭೂಮಿ ೧೫.೮೫೨ ಹೆಕ್ಟೇರ್ ಇದೆ. ಸಾಗುವಳಿ ಮಾಡದೆ ಇರುವ ಭೂಮಿ ೫೦೧೮ ಹೆಕ್ಟೇರ್ ಇದೆ. ಬಂಜರು ಭೂಮಿ ೨೪೭೫೩ ಹೆಕ್ಟೇರ್‌ಗಳಷ್ಟು ಇದ್ದು ಸಾಗುವಳಿ ಭೂಮಿಯ ಕ್ಷೇತ್ರ ೧.೦೧೫೯೬ ಹೆಕ್ಟೇರ್ ಇದೆ. ಮುಂಗಾರು ಬೆಳೆಯ ಕ್ಷೇತ್ರ ೭೫೮೦ ಹೆಕ್ಟೇರ್‌ಗಳಿದ್ದರೂ ಹಿಂಗಾರು ಬೆಳೆಯ ಕ್ಷೇತ್ರ ೪೯,೮೩೦ ಹೆಕ್ಟೇರ್‌ಗಳಷ್ಟು ಇದ್ದು, ಬೆಳೆಯ ಪ್ರದೇಶ ೧೩.೫೧೮ರಷ್ಟು ಇದ್ದರೆ, ಬೇಸಿಗೆ ಬೆಳೆಯ ಕ್ಷೇತ್ರ ೧೧೬೬೦ರಷ್ಟು ಹೆಕ್ಟೇರ್‌ಗಳಿಂದ ಕೂಡಿದೆ. ನೀರಾವರಿಯಲ್ಲಿ ೮,೯೭೪ ಹೆಕ್ಟೇರ್ ಹೊಂದಿದ್ದು, ಒಟ್ಟು ೩೨೫ ಕೆರೆಗಳು ತಾಲ್ಲೂಕಿನ ಪರಿಸರದಲ್ಲಿ ಕಂಡುಬರುತ್ತವೆ.

"ಈ ಪರಿಸರದಲ್ಲಿ ಪೆನಿನ್ ನೈಸ್ ಮತ್ತು ಕಣಶಿಲೆಗಳು ತಾಲ್ಲೂಕಿನ ಉತ್ತರ ಮತ್ತು ಪೂರ್ವ ಭಾಗವನ್ನೂ ಆಕ್ರಮಿಸಿವೆ. ಗುರುಮಿಟಕಲ್ ಪ್ರಸಿದ್ಧವಾಗಿರುವುದು ಅದರ ಸುತ್ತಮುತ್ತಲಿನ ಭೂ ವೈಜ್ಞಾನಿಕ ವೈಶಿಷ್ಟ್ಯಗಳಿಂದ ಕೂಡಿದೆ. ಆಂಧ್ರ ಪ್ರದೇಶದ ಗಡಿಯಲ್ಲಿರುವ ಈ ಭಾಗ ಕ್ರಿಟೇಷಿಯಸ್ ಯುಗದ ಬೇಸಾಲ್ಟ್ ಶಿಲೆಗಳು ನಡುವೆ ದೊರೆಯುತ್ತಿರುವ ಅಂತಃಸ್ತರಗಳು ಭೂ ವಿಜ್ಞಾನಗಳ ಗಮನ ಸೆಳೆದಿವೆ."[೯]

ಈ ಪರಿಸರದ ಅರಕೇರಾ (ಕೆ) ಗ್ರಾಮದಲ್ಲಿ ಸೋಡಿಯಂ ಕಾರ್ಬೊನೈಟ್ ಖನಿಜ ಸಂಪತ್ತಾದ ಗ್ರಾನೈಟ್ ಕಲ್ಲು ಸಿಗುತ್ತದೆ. ಈ ಸೋಡಿಯಂ ನಿಂದ ಗಾಜಿನ ಗ್ಲಾಸ್ ಸಹ ತಯಾರಿಸುವುದು ಗಮನಾರ್ಹವಾಗಿದೆ. ಇನ್ನೂ ಹಲವು ಕಡೆ ಹಳ್ಳದ ದಡದಲ್ಲಿ ಉಪ್ಪು ಸಿಗುವುದು ಮತ್ತು ಉಸುಕು ದೊರೆಯುತ್ತವೆ. ಈ ಪರಿಸರದಲ್ಲಿ ಯಾವುದೇ ಗಣಿಗಾರಿಕೆಯ ಚಟುವಟಿಕೆಗಳು ಕಂಡುಬರುವುದಿಲ್ಲ.

"ಈ ಪರಿಸರದ ಅನೇಕ ಕಡೆಗಳಲ್ಲಿ ಅಚ್ಚ ಬಿಳಿಯ ಬೆಣಚು ಸಿಗುವುದು ಕಂಡುಬರುತ್ತದೆ."[೧೦] ಈ ಭಾಗದಲ್ಲಿ ಜನತೆಗೆ ಪುರಾತನ ಕಾಲದ ಸಂಸ್ಕೃತಿಯಿದೆ. ಇವರ ಬದುಕು ವಿಶಿಷ್ಟ ಚಟುವಟಿಕೆಗಳಿಂದ ಕೂಡಿದೆ. ಈ ಪರಿಸರದಲ್ಲಿ ಖನಿಜಗಳ ಅಲ್ಪ ಪ್ರಮಾಣದಲ್ಲಿ ಭೂಮಿಯ ಮೇಲೆ ದೊರೆಯುತ್ತದೆ ಎಂದೂ ತಿಳಿದುಬರುತ್ತದೆ.

ಕಲಬುರ್ಗಿ ಇತರೆ ತಾಲ್ಲೂಕುಗಳಿಗೆ ಹೋಲಿಸಿದರೆ ಯಾದಗಿರಿಯ ಪರಿಸರದಲ್ಲಿ ಜಲಸಂಪತ್ತು ಹೆಚ್ಚಿನ ಪ್ರಮಾಣದಲ್ಲಿದೆ. ಆದರೆ ಸಮರ್ಪಕವಾದ ರೀತಿಯಲ್ಲಿ ಬಳಕೆಯಾಗುತ್ತಿಲ್ಲ. ತಾಲ್ಲೂಕಿನಲ್ಲಿ ಜಲ ಸಂಪನ್ಮೂಲಕ್ಕೆ ಕೊರತೇಯೇನಿಲ್ಲ. ಹತ್ತಾರು ಹಳ್ಳಗಳು ಹರಿಯುತ್ತವೆ. ಭೀಮಾ ನದಿಯೂ ಈ ಪರಿಸರದಲ್ಲಿ ಹರಿಯುತ್ತದೆ. ಅಲ್ಲದೆ ೩೨೫ ಕೆರೆಗಳು ಈ ತಾಲ್ಲೂಕಿನಲ್ಲಿವೆ. ಈ ಎಲ್ಲ ಸಂಪನ್ಮೂಲವನ್ನು ಸರಿಯಾಗಿ ಬಳಸಿಕೊಂಡರೆ ತಾಲ್ಲೂಕು ನೀರಾವರಿಗೊಳ್ಳಬಹುದು ಎಂದೂ ನನ್ನ ಅಭಿಪ್ರಾಯ. ತಾಲ್ಲೂಕಿನ ೮.೯೭೪ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಒದಗಿಸಲಾಗಿದೆ. ಹತ್ತಿರ್ಕು ಹಳ್ಳಕ್ಕೆ ಅಡ್ಡಲಾಗಿ ಜಲಾಶಯವನ್ನು ನಿರ್ಮಿಸಲಾಗಿದೆ. ಇದು ೧೯೬೦ರಲ್ಲಿ ಆರಂಭಗೊಂಡು ೧೯೭೩ರಲ್ಲಿ ಮುಗಿಯಿತು. ಈ ಯೋಜನೆಯಿಂದ ೨.೧೪೫ ಹೆಕ್ಟೇರ್ ಪ್ರದೇಶವು ನೀರುಣ್ಣುವುದು (ನೀರಾವರಿ ಸಾಗುವಳಿ)ಆಗಿದೆ. ಸೌವಾಗಾಲ್ ಅಣೆಕಟ್ಟು ಹತ್ತಿಕುಣಿ ಹಳ್ಳದ ಎಪನಾಲಾ ಆಗಿದೆ. ಇದು ೧೯೭೩ರಲ್ಲಿ ಆರಂಭಗೊಂಡು ೧೯೮೭ರಲ್ಲಿ ಪೂರ್ಣಗೊಂಡಿದ್ದು, ಇದರಿಂದ ೧.೪೧೭ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ದೊರಕುತ್ತಿದೆ. ಹಾಗೂ ಏತ ನೀರಾವರಿ ಜಾರಿಯಲ್ಲಿವೆ. ನಿರ್ಮಾಣದ ವಿವಿಧ ಹಂತದಲ್ಲಿರುವ ನೀರಾವರಿ ಯೋಜನೆಗಳು ತಾಲ್ಲೂಕಿನಲ್ಲಿವೆ. ಕೌಳೂರು ಗ್ರಾಮದ ಹತ್ತಿರ ಭೀಮಾ ನದಿಗೆ ಬ್ಯಾರೆಜ್ ಎಂದು ನಿರ್ಮಿಸಲಾಗಿದೆ. ಅನೂರ್ (ಬಿ) ಬ್ರಿಜ್ ಕಮ್ ಬ್ಯಾರೇಜ್ ನಿರ್ಮಾಣ ಹಂತದಲ್ಲಿದೆ. ಇವುಗಳೆಲ್ಲವು ಮಧ್ಯ ನಿರೀಕ್ಷಿತ ಮಟ್ಟದಲ್ಲಿ ಫಲಾನುಭವಿಗಳಿಗೆ ನೀರು ಒದಗಿಸುವಲ್ಲಿ ಸರ್ಕಾರದ ಸಾಧನೆ ಮಂದಗತಿಯಲ್ಲಿದೆ. ಹೀಗೆ ಈ ಪರಿಸರದಲ್ಲಿ ಯಾವುದೇ ರೀತಿಯಲ್ಲಿ ಜನಸಂಪನ್ಮೂಲದ ಬಗ್ಗೆ ಕೊರತೆ ಎದ್ದು ಕಂಡುಬರುವುದಿಲ್ಲ.

ಈ ಪರಿಸರದಲ್ಲಿ ವನ್ಯ ಜೀವಿಗಳೂ ಹೆಚ್ಚಾಗಿಲ್ಲ. ಯರಗೋಳ, ಬಾಚವಾರ, ಕೋಡರಗಿ, ರಾಮಸಮುದ್ರ ಮತ್ತು ಬಳಿಚಕ್ರ ಕಾಡುಗಳಲ್ಲಿ ಕತ್ತೆಕಿರುಬ, ತೋಳ, ಕಾಡು, ನಾಯಿ, ಹಂದಿಗಳನ್ನು ಕಾಣಬಹುದು. ಇನ್ನೂ ಕೆಲವು ಬಯಲು ಪ್ರದೇಶದಲ್ಲಿ ಜಿಂಕೆ, ನರಿ ಮೊಲ ಮುಂತಾದ ಪ್ರಾಣಿಗಳನ್ನು ಕಾಣಬಹುದು. ಗಿಳಿ, ಮರಕುಟುಕ, ನವಿಲು, ಗೂಬೆ, ಹದ್ದು, ಹಾಡುಹಕ್ಕಿ, ಕಾಗೆ, ಗುಬ್ಬಿ, ಪಾರಿವಾಳ, ಕೋಗಿಲೆಗಳು ಮುಂತಾದ ಪಕ್ಷಿಗಳು ಬಹುತೇಕ ವಿರಳವಾಗಿವೆ. ಗೋಸಂಬೆ, ಚೇಳು, ಎಡುಬು, ನಾಗರಹಾವು ಮೊದಲಾದ ಪ್ರಾಣಿಗಳನ್ನು ಕಾಣಬಹುದು. ಎತ್ತು, ಎಮ್ಮೆ, ಆಕಳು, ಕೋಳಿ, ನಾಯಿ ಮುಂತಾದವುಗಳು ಈ ಭಾಗದಲ್ಲಿ ರೈತರ ಸಾಕು ಪ್ರಾಣಿಗಳಾಗಿವೆ.

"ಈ ಪರಿಸರವು ಸಮುದ್ರ ಮಟ್ಟದಿಂದ ೩೦೦ ರಿಂದ ೮೦೦ ಮೀ. ಎತ್ತರ ಇದ್ದು, ಒಣ ಹವೆಯಿಂದ ಕೂಡಿರುತ್ತವೆ. ತಾಲ್ಲೂಕಿನ ಈಶಾನ್ಯ ಭಾಗದಲ್ಲಿ ಅಲ್ಲಲ್ಲಿ ದಟ್ಟದಿಂದ ಅರಣ್ಯಗಳು ಕಂಡುಬರುತ್ತವೆ."[೬]

ತಾಲ್ಲೂಕಿನ ಬಹುತೇಕ ಭಾಗದಲ್ಲಿ ಅನೇಕ ತೋಟಗಾರಿಕೆ ಇದ್ದು ಸಾಕಷ್ಟು ಸಸ್ಯ, ಸಂಪತ್ತು ರಕ್ಷಣೆ ಮಾಡಲಾಗಿದೆ. ಪ್ರಮುಖ ಸಸ್ಯ ಸಂಪತ್ತು ಮಾವು, ನೀರಲ, ಬೇವು, ನೀರಲ, ಚಿಕ್ಕ ಜೆಂಪಲ ಹಣ್ಣು, ನೀಲಗಿರಿ ಮುಂತಾದವು ಈ ಭಾಗದಲ್ಲಿ ಸಸ್ಯ ಸಂಪತ್ತಾಗಿದೆ.

ಈ ಪರಿಸರದಲ್ಲಿ ಸ್ವಾಭಾವಿಕವಾಗಿ ಬೆಟ್ಟಗಳು ಸಾಲು ಸಾಲಾಗಿ ಕಂಡುಬರುತ್ತವೆ. ಯಾದಗಿರಿ ಪರಿಸರದ ಬೆಟ್ಟವು ಸುಮಾರು ೫೦೦ ಅಡಿ ಎತ್ತರದಲ್ಲಿ ಕೂಡಿದ್ದು ಬೃಹತಾಕಾರದ ವಿಶಾಲವಾಗಿದ್ದು, ಗಿರಿದುರ್ಗವು ಕಲ್ಯಾಣಿ ಚಾಲುಕ್ಯರ ೩ನೆಯ ಜಯಸಿಂಹನ ರಾಜಧಾನಿಯಾಗಿತ್ತೆಂದು ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ಯರಗೋಳದ ಬೆಟ್ಟವನ್ನು ರಾಮಲಿಂಗೇಶ್ವರ ಗಿರಿದುರ್ಗ ಎಂದೂ ಕರೆಯುತ್ತಾರೆ. ಈ ದುರ್ಗದಲ್ಲಿ ಪ್ರಾಚೀನ ಕಾಲದ ಕೆಲವು ಅವಶೇಷಗಳು ಕಂಡುಬರುತ್ತದೆ. ಕಪ್ಪು ಶಿಲೆಯ ಸುಂದರವಾದ ಮೂರು ನಂದಿ ವಿಗ್ರಹಗಳಿವೆ. ಹೀಗೆ ಈ ಬೆಟ್ಟ ಸಕಲ ಪ್ರಾಣಿಗಳಿಗೆ ಮತ್ತು ಸಸ್ಯಗಳ ತಾಣವಾಗಿದೆ. ಗವಿಸಿದ್ಧಲಿಂಗೇಶ್ವರ ಬೆಟ್ಟವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ವಿದ್ಯಾಕೇಂದ್ರ ಎಂದೂ ಯರಗೋಳ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಸುಮಾರು ೪೦೦ ಅಡಿ ಎತ್ತರವಾಗಿರುವ ಬಿಳಿಚಕ್ರದ ಬೆಟ್ಟವನ್ನು ಹುಲ್ಲಿಬೇಟ ಎಂದೂ ಕರೆಯಲಾಗುತ್ತದೆ. ಈ ಬೌದ್ಧ ಧರ್ಮದ ಕೆಲವು ಅವಶೇಷಗಳು ಈ ಬೆಟ್ಟದಲ್ಲಿ ದೊರತಿವೆ ಮತ್ತು ೫೦೦ ಅಡಿ ಎತ್ತರದಲ್ಲಿರುವ ಮೈಲಾರಲಿಂಗೇಶ್ವರ ಬೆಟ್ಟವು ಅನೇಕ ವೀರಗಲ್ಲು ಮಾಸ್ತಿಗಲ್ಲುಗಳನ್ನು ಹೊಂದಿದೆ. ಹೀಗೆ ಯಾದಗಿರಿಯ ಪರಿಸರವು ಭೌಗೋಳಿಕವಾಗಿ ಪ್ರಮುಖವಾದ ಪಾತ್ರವಹಿಸಿದೆ.

**ಪ್ರಾಗೈತಿಹಾಸ**

ಸ್ವತಂತ್ರಪೂರ್ವ ಕಾಲದಿಂದಲೂ ಭಾರತದ ಹಾಗೂ ಕರ್ನಾಟಕದ ಬೇರೆ ಬೇರೆ ಪ್ರಾಚೀನ ಸಂಸ್ಕೃತಿಯ ನೆಲೆಗಳನ್ನು ಕುರಿತು ದೇಶೀಯ ಹಾಗೂ ವಿದೇಶಿ ಪುರಾತತ್ವ ಶಾಸ್ತ್ರಜ್ಞರು, ಸಂಶೋಧನೆಯನ್ನು ಕೈಗೊಂಡಿದ್ದಾರೆ. ಆರಂಭಿಕ ಹಂತದಲ್ಲಿ ಪುರಾತತ್ವ ವಿದ್ವಾಂಸರು ಪ್ರಾಚೀನ ನಾಗರಿಕತೆಯ ಬಗೆಗೆ ಮಾಹಿತಿಯನ್ನು ಸಂಗ್ರಹಿಸಿ ಪರಿಚಯಿಸಿದರೆ, ನಂತರದ ಮಾಹಿತಿಯನ್ನು ಅರ್ಥೈಸಿ ವಿಶ್ಲೇಷಿಸುವ ಕಾರ್ಯವನ್ನು ಕೈಗೊಂಡಿದ್ದಾರೆ. ಈ ದಿಸೆಯಲ್ಲಿ ರಾಬರ್ಟ್ ಬ್ರೂಸ್‌ಪೂಟ ಕರ್ನ್‌ಲ್ ಮೆಕಂಜಿ, ಎಂ.ಎಚ್.ಕೃಷ್ಣ, ಬಿ.ಸುಬ್ಬರಾವ್, ಆರ್. ಶೇಷಾದ್ರಿ, ಎಚ್.ಡಿ.ಸಂಕಾಲಿಯ ಹಾಗೂ ಸುಂದರರವರು ಕೈಗೊಂಡು ಸರ್ವೇಕ್ಷಣೆ ಹಾಗೂ ಅನ್ವೇಷಣೆಯ ಫಲವಾಗಿ ನೂರಾರು ಹಳೆಶಿಲಾಯುಗ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ. ಭಾರತೀಯ ಪುರಾತತ್ವ ಇಲಾಖೆ, ಮೈಸೂರು ಪುರಾತತ್ವ ಇಲಾಖೆ ಹಾಗೂ ಪುಣೆಯಲ್ಲಿ ಡೆಕ್ಕನ್ ಕಾಲೇಜು ಸಂಸ್ಥೆಗಳ ಇತಿಹಾಸಪೂರ್ವ ನೆಲೆಗಳನ್ನು ಪತ್ತೆ ಹಚ್ಚುವಲ್ಲಿ ಶ್ರಮವಹಿಸಿ ದುಡಿದಿದೆ. ಮದ್ರಾಸಿನ ಬಳಿಯ ಪಲ್ಲಾವರು ಎಂಬಲ್ಲಿ ಕ್ರಿ.ಶ. ೧೮೬೩ರಲ್ಲಿ ರಾಬರ್ಟ್ ಬ್ರೂಸ್

ಪೂಟ್‌ರು ಜಂಬು ಮಣ್ಣಿನ ಗರಸು ನೆಲದಲ್ಲಿ ಮೊದಲ ಬಾರಿಗೆ ಶಿಲಾಯುಗದ ಉಪಕರಣಗಳನ್ನು ಶೋಧಿಸಿದ್ದಾರೆ.

ಕರ್ನಾಟಕದಲ್ಲಿಯೂ ಕೂಡ ಇವರೇ ಮೊದಲ ಬಾರಿಗೆ ಪ್ರಾಚೀನ ನಾಗರಿಕತೆಗಳನ್ನು ಗುರುತಿಸುವ ಪ್ರಯತ್ನ ಮಾಡಿ ಯಶಸ್ವಿಯಾಗಿದ್ದಾರೆ. ಆರ್.ಎಸ್.ಪಪ್ಪು, ಎಸ್.ಬಿ.ದೇವ್, ಆರ್.ವ್ಹಿ. ಜೋಷಿ, ಎಸ್.ಎಸ್.ಮಾಳವಾಡ ಮತ್ತು ಸುಂದರ ರವಿ ಕೋರಿಶೆಟ್ಟರ ಮೊದಲಾದ ಸಂಶೋಧಕರು ಉತ್ತರ ಕರ್ನಾಟಕದ ಪ್ರಾಗೈತಿಹಾಸ ಕಾಲದ ಬೇರೆ ಬೇರೆ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಿದರೆ ಸುಂದರ ಅವರು ಎತ್ತರ ಕರ್ನಾಟಕದ ಪ್ರಮುಖ ಪ್ರಾಗತಿಹಾಸಿಕ ನೆಲೆಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಿದವರಲ್ಲಿ ಮೊದಲಿಗರು. ಶೈಕ್ಷಣಿಕ ಸಂಸ್ಥೆಗಳಲ್ಲಿ ಉತ್ತಮ ಸಂಶೋಧನೆಯ ಕಾರ್ಯಗಳನ್ನು ನಿರ್ವಹಿಸುತ್ತಿರುವ ಕರ್ನಾಟಕ ಇತಿಹಾಸ ಅಕಾಡೆಮಿ ಹಾಗೂ ಕರ್ನಾಟಕದ ಇತಿಹಾಸ ಕಾಂಗ್ರೆಸ್ ಪರಿಷತ್‌ಗಳು ತಮ್ಮ ವಾರ್ಷಿಕ ಸಮ್ಮೇಳನದಲ್ಲಿ ಹೊಸ ಹೊಸ ನೆಲೆಗಳನ್ನು ಪರಿಚಯಿಸುವ ಹಾಗೂ ಅರ್ಥೈಸುವ ಕಾರ್ಯಗಳನ್ನು ಯಾದಗಿರಿ ಪರಿಸರದಲ್ಲಿ ಭೀಮಾ ನದಿಯು ಹರಿಯುವುದರಿಂದ ಈ ಪರಿಸರದಲ್ಲಿ ಪ್ರಾಚೀನ ಕಾಲದ ಶಿಲಾಯುಗ ಸಂಸ್ಕೃತಿಯ ಅನೇಕ ಅವಶೇಷಗಳು ಕಂಡುಬರುತ್ತವೆ ಮತ್ತು ಪರಿಸರವು ಶಿಲಾಯುಗ ಸಂಸ್ಕೃತಿಯ ತಾಣವಾಗಿತೆಂದು ಅವರ ಕಾಲದಲ್ಲಿ ದೊರೆಯುತ್ತಿರುವ ಉಪಕರಣಗಳಿಂದ ತಿಳಿದುಬರುತ್ತದೆ.

**ಅ. ಆದಿ ಹಳೆಶಿಲಾಯುಗದ ನೆಲೆಗಳು:**

ಆದಿ ಹಳೆಯ ಶಿಲಾಯುಗದ ಕೆಲವು ನೆಲೆಗಳು ಯಾದಗಿರಿ ಪರಿಸರದಲ್ಲಿ ಕಂಡುಬರುತ್ತದೆ. "ಯಡಿದಳ್ಳಿ ಎಂಬ ಗ್ರಾಮದಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರೆತಿದ್ದು ಅಶೂಲಿಯನ್ ಮಾದರಿಯಲ್ಲಿವೆ. ಕೈಗೊಡಲಿ, ಮಚ್ಚುಗತಿ, ಹೆರೆಗತ್ತಿ ಮೊದಲಾದ ಮುಖ್ಯ ಉಪಕರಣಗಳು ದೊರೆತಿವೆ. ಈ ಗ್ರಾಮವು ಹಳ್ಳದ ಪಕ್ಕದಲ್ಲಿರುವುದರಿಂದ ಈ ಉಪಕರಣಗಳು ದೊರೆತಿವೆ."

ಯಾದಗಿರಿಯ ಪರಿಸರದ "ಭೀಮಾ ನದಿಯ ದಂಡೆಯ ಮೇಲೆ ಆದಿಹಳ್ಳಿ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿತ್ತು" ಎಂದೂ ತಿಳಿದುಬರುತ್ತದೆ. ಈ ಪರಿಸರದ ಆದಿ ಹಳೆಯ ಶಿಲಾಯುಗದ ನೆಲೆಗಳಲ್ಲಿ ಕ್ಷೇತ್ರಕಾರ್ಯಗಳನ್ನು ಕೈಗೊಳ್ಳಲಾಯಿತು. ಈ ಪರಿಸರ ಮಾನವನಿಗೆ ವಾಸಿಸಲು ಪ್ರಶಸ್ತವಾದ ಪ್ರದೇಶವಾಗಿದೆ. ಮಾನವನು ತನ್ನ ವಾಸಸ್ಥಾನವನ್ನು ನದಿ ಹಾಗೂ ಬೆಟ್ಟದಾಸರೆಯಲ್ಲಿ ಆಯ್ಕೆ ಮಾಡಿಕೊಂಡಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಈ ನದಿ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಆದಿಶಿಲಾಯುಗದಿಂದ ಬೃಹತ್ ಶಿಲಾಯುಗದ ಸಂಸ್ಕೃತಿಯವರೆಗೆ ವಿವಿಧ ಕಾಲಘಟ್ಟವನ್ನು ಗುರುತಿಸಲಾಯಿತು. ಕಪ್ಪು ಮಣ್ಣಿನಿಂದ ಆವೃತ್ತವಾದ ಈ ಪ್ರದೇಶದಲ್ಲಿ ಇಂದಿಗೂ ಜನವಸತಿ ಇದೆ. ಹೀಗೆ ಈ ಪರಿಸರವು ಆದಿ ಹಳೆಯ ಶಿಲಾಯುಗದ ತಾಣವಾಗಿತ್ತು ಎಂದೂ ತಿಳಿದುಬರುತ್ತದೆ.

**ಆ. ಮಧ್ಯಹಳೆಯ ಶಿಲಾಯಗ**

"ಯಾದಗಿರಿ ಪರಿಸರವು ಮಧ್ಯಹಳೆಯ ಶಿಲಾಯುಗ ಸಂಸ್ಕೃತಿಯ ಅನೇಕ ಉಪಕರಣಗಳು ದೊರೆತಿವೆ. ಈ ಪರಿಸರದ ಕೊಲ್ಲೂರು ಎಂಬ ಗ್ರಾಮದಲ್ಲಿ ಈ ಸಂಸ್ಕೃತಿಯ ನೆಲೆಯಿದ್ದು, ಮೊನೆ, ಕೊರೆಗ, ದಬ್ಬಳ, ಕೊರೆಯಳಿ ಮಾದರಿಯ ಉಪಕರಣಗಳು ಹಾಗೂ ಕಿರು ಕೈಗೊಡಲಿ ಮತ್ತು ಮಚ್ಚುಗತ್ತಿಗಳು ದೊರೆತಿವೆ. ಮತ್ತು ಯಾದಗಿರಿಯ ಭೀಮಾ ನದಿಯ ಪರಿಸರದಲ್ಲಿ ಮಧ್ಯ ಹಳೆಯ ಶಿಲಾಯುಗದ ಸಂಸ್ಕೃತಿಯ ನೆಲೆಯಿದು. ಉಪಕರಣಗಳು ಸ್ತರ ವಿವರಣೆಯೊಂದಿಗೆ ದೊರೆತಿವೆ. ಹರತಕ್ಕೆ ಕೊರೆಗ ಮತ್ತು ಕೈಗೊಡಲಿಗಳು ದೊರೆತಿವೆ."[೬] ಈ ಗ್ರಾಮ ಮತ್ತು ಪಟ್ಟಣ ಭೀಮಾ ನದಿಯ ಪರಿಸರದಲ್ಲಿ ಇರುವುದರಿಂದ ಆದಿ ಹಳೆಯ ಶಿಲಾಯುಗ ಹಾಗೂ ಮಧ್ಯ ಹಳೆಯ ಶಿಲಾಯುಗದ ಸಂಸ್ಕೃತಿ ಪಸರಿಸಿರುವುದು ಕಂಡುಬರುತ್ತದೆ.

**ಇ. ಬೃಹತ್ ಶಿಲಾಯುಗ:**

ಯಾದಗಿರಿ ಪರಿಸರದಿಂದ ಸುಮಾರು ೪೦. ಕೀ.ಮೀ. ದೂರದಲ್ಲಿರುವ ಪೂರ್ವ ದಿಕ್ಕಿಗಿರುವ "ಕೊಂಡಾಪುರ ಎಂಬ ಗ್ರಾಮದಲ್ಲಿ ಹಳ್ಳದ ದಂಡೆಯ ಮೇಲೆ ಬೃಹತ್ ಶಿಲಾ ಸಂಸ್ಕೃತಿಯ ಗೋರಿ ನೆಲೆಯಿದ್ದು, ಕಲ್ಮನೆಗಳು ದೊರೆತಿವೆ ಹಾಗೂ ಗುರುಮಿಠಕಲ್ ಪಟ್ಟಣದಲ್ಲಿ ಈ ಸಂಸ್ಕೃತಿಯು ನೆಲೆಯಾಗಿತ್ತು ಎಂದೂ ತಿಳಿದುಬರುತ್ತದೆ."[೮] "ಸೈದಾಪೂರ ಪಟ್ಟಣದ ರಾಚನಹಳ್ಳಿ ಎಂಬ ಗ್ರಾಮದಲ್ಲಿ ಈ ಸಂಸ್ಕೃತಿಯ ಗೋರಿ ನೆಲೆಯಿದ್ದು ಶಿಲಾವೃತ್ತಗಳು ಕಂಡುಬಂದಿವೆ. ಸಾಂಗ್ವರ ಎಂಬ ಗ್ರಾಮದಲ್ಲಿ ಈ ಸಂಸ್ಕೃತಿಯ ಗೋರಿ ನೆಲೆಯಿದೆ."[೯] ಹೀಗೆ ಯಾದಗಿರಿ ಪರಿಸರದ ಈ ಗ್ರಾಮಗಳು ಭೀಮಾ ನದಿಯ ಎಡದಂಡೆಗೆ ಇರುವುದರಿಂದ ಬೃಹತ್ ಶಿಲಾಯುಗ ಸಂಸ್ಕೃತಿಯ ವಸತಿಯ ಪ್ರದೇಶವಾಗಿತ್ತು ಎಂದು ತಿಳಿದುಬರುತ್ತದೆ.

ಹೀಗೆ ಯಾದಗಿರಿ ಪರಿಸರದ ಪಟ್ಟಣ ಮತ್ತು ಕೆಲವು ಗ್ರಾಮಗಳಿಂದ ಕೊಲ್ಲೂರು ಕೊಂಡಾಪುರ ಗುರುಮಿಟಕಲ್ ಯಡ್ಡಿಹಳ್ಳಿ, ರಾಚನಹಳ್ಳಿ, ಸಾಂಗ್ವರ ಗ್ರಾಮಗಳು ಹಳ್ಳದ ದಂಡೆಯ ಮೇಲೆ ಇರುವುದರಿಂದ ಮತ್ತು ಭೀಮಾ ನದಿಯ ಪರಿಸರದ ದಂಡೆಯ ಮೇಲೆ ಇರುವುದರಿಂದ ಆದಿ ಹಳೆಶಿಲಾಯುಗ, ಮಧ್ಯ ಆದಿ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಹಾಗೂ ತಾಮ್ರ ಶಿಲಾಯುಗದ ಕೆಲವು ಉಪಕರಣಗಳು ದೊರೆತಿವೆ. ಆದರೆ ಗೋರಿಗಳು ಕಂಡುಬರುವುದಿಲ್ಲ.

**೨.೨. ಆರಂಭದ ಇತಿಹಾಸದಿಂದ ಕ್ರಿ.ಶ. ೧೦ನೆಯ ಶತಮಾನದವರೆಗೆ:**

ಪ್ರಾಚೀನ ಕರ್ನಾಟಕವನ್ನು ಪ್ರಪ್ರಥಮವಾಗಿ ನಂದರು ಆಳಿದರು. ಇವರ ತರುವಾಯದಲ್ಲಿ ಮೌರ್ಯರು, ಗುಪ್ತರು ಮತ್ತು ಶಾತವಾಹನರು ಆಳಿದರು. ಇವರ ನಂತರದಲ್ಲಿ ಕನ್ನಡ ನಾಡಿನ

ಅಚ್ಚಗನ್ನಡಿಗರಾದ ಕದಂಬರು ಆಳ್ವಿಕೆ ಮಾಡಿದ್ದಾರೆ. ಕದಂಬರ ಸಾಮ್ರಾಜ್ಯದ ಸಂಸ್ಥಾಪಕ ಕದಂಬ ಮಯೂರವರ್ಮ ಕನ್ನಡದ ಅರಸುಮನೆತನಗಳಲ್ಲಿ ಪ್ರಖ್ಯಾತಿ ಪಡೆದ ಅರಸು ಮನೆತನ ಕದಂಬ ವಂಶಸ್ಥರದು. ಈ ಅರಸು ಮನೆತನದ ಉಚ್ಛ್ರಾಯ ಕಾಲದಲ್ಲಿ ಬೆಳಗಾವಿ ಜಿಲ್ಲೆಯ ದಕ್ಷಿಣ ಭಾಗದಿಂದ ಹಿಡಿದು ಶ್ರೀಶೈಲದವರೆಗೂ, ದಕ್ಷಿಣದಲ್ಲಿ ಹಾಸನ, ತುಮಕೂರು ಜಿಲ್ಲೆಗಳ ಉತ್ತರ ಭಾಗ, ಪಶ್ಚಿಮಕ್ಕೆ ಅರಬ್ಬಿ ಸಮುದ್ರದವರೆಗೂ ವಿಸ್ತರಿಸಿತು."[೧೦] ಈ ವಂಶದ ಪ್ರಬಲ ಹಾಗೂ ಪ್ರಸಿದ್ಧ ಅರಸು ರವಿವರ್ಮನು ನರ್ಮದಾ ನದಿಯವರೆಗೂ ತನ್ನ ವಿಜಯಯಾತ್ರೆ ನಡೆಸಿದನೆಂದು ತಿಳಿದುಬರುತ್ತದೆ. ಹೀಗಾಗಿ ಸಮಸ್ತ ಕನ್ನಡ ನಾಡಿನ ಅರಸುಮನೆತನದ ರಾಜಕೀಯ ಇತಿಹಾಸವು ಇವರಿಂದಲೇ ಪ್ರಾರಂಭವಾಯಿತೆಂದು ಹೇಳಬಹುದು.

ಕದಂಬರ ತರುವಾಯ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರಿ ಅರಸರು, ಗಂಗರು, ಹೊಯ್ಸಳರು, ಯಾದವರು ಹಾಗೂ ವಿಜಯನಗರ ಅರಸರು, ಕರ್ನಾಟಕ ಪ್ರದೇಶವನ್ನಾಳಿದ್ದಾರೆ.

ನಾವು ಇತಿಹಾಸದ ಪುಟವನ್ನು ತಿರುವಿ ಹಾಕಿದಾಗ ಅನೇಕ ಬದಲಾವಣೆಗಳು ಕಂಡುಬರುತ್ತವೆ. ಬದಲಾವಣೆ ಪ್ರಕೃತಿಯ ನಿಯಮ. ಮನುಷ್ಯನ ಬದುಕು ನಿಂತ ನೀರಾಗಬಾರದು. ಹರಿಯುವ ನೀರಾಗಬೇಕು. ಅದೇ ಪ್ರಕಾರ ಕಾಲಗತಿಸಿದಂತೆ ಅಲ್ಲಿನ ಧರ್ಮ, ಕಲೆ, ಇತಿಹಾಸ ಬದಲಾಗುವುದು ಸಹಜ. ರಾಜ ಮಹಾರಾಜರ ಆಡಳಿತ ಅವರ ಚರಿತ್ರೆ ಬದಲಾಗುತ್ತದೆ. ರಾಜನ ಶಕ್ತಿಗನುಗುಣವಾಗಿ ಅವರ ವೈಚಾರಿಕ ನಿಲುವು, ಎದ್ದು ಕಾಣುತ್ತದೆ.

ರಾಜನಲ್ಲಿ ಅಂತಹ ವೈಚಾರಿಕ ನಿಲುವು ಇಲ್ಲದೇ ಹೋದರೆ ತನ್ನ ರಾಜಕೀಯ ವ್ಯವಸ್ಥೆಯಲ್ಲಿ ಏರುಪೇರಾಗುವುದು ಸಹಜ. ಅದು ಆದಾಗ ರಾಜನಾದವನು ತಿದ್ದಿಕೊಳ್ಳಬೇಕು. ಇಲ್ಲದಿದ್ದರೆ ತನ್ನ ರಾಜ್ಯದ ರಾಜಕೀಯಕ್ಕೆ ಚ್ಯುತಿ ಬರುತ್ತದೆ. ತನ್ನ ರಾಜಕೀಯ ಚಾರಿತ್ರ್ಯಕ್ಕೆ ಹೊಸ ಅರ್ಥ ಹುಡುಕುವ ಅನ್ವೇಷಕ ಮನೋಭಾವ ಇರಬೇಕು. ಹೀಗಿದ್ದಾಗ ಮಾತ್ರ ಸುಸಂಸ್ಕೃತ ರಾಜನಾಗಲು ಸಾಧ್ಯ ಪ್ರಜೆಗಳು ತಮ್ಮ ಜೀವನದ ಅವಧಿಯಲ್ಲಿ ಹೆಚ್ಚು ಬಯಸುವುದೇ ಸಮೃದ್ಧಿಯ ಬದುಕು. ಅನೇಕ ಸಂದರ್ಭದಲ್ಲಿ ರಾಜಮನೆತನಗಳ ಮೇಲೆ ದಾಳಿಗಳಾಗುವವು. ಅಂತಹ ಸಂದರ್ಭದಲ್ಲಿ ಪ್ರಜೆಗಳ ಯೋಗ ಕ್ಷೇಮ ಕಾಣದೇ ಹೋದಾಗ, ವಿಚಾರಣೆ ಕೇಳದೇ ಇದ್ದಾಗ ಅವರು ದುಃಖತಪ್ತರಾಗುತ್ತಾರೆ. ಈ ಸಂದರ್ಭದಲ್ಲಿಯೂ ಪ್ರಜೆಗಳು ಪಾಲ್ಗೊಳ್ಳಬೇಕಾಗುತ್ತದೆ. ಅವರ ಬದುಕಿನ ಮೇಲೆ ನಂಬಿಕೆ ಇಲ್ಲದೆ ಹೋದಾಗ, ಕೆಟ್ಟ ಪರಿಣಾಮ ಬೀರಿದಾಗ ನಿಜವಾದ ಚರಿತ್ರೆ ಒಮ್ಮೊಮ್ಮೆ ಇತಿಹಾಸ ಸುಳ್ಳಾಗಬಹುದು. ಇತಿಹಾಸವೆಂದರೆ ಕೇವಲ ಗತಕಾಲದಲ್ಲಿ ಆಗಿಹೋದ ಘಟನೆ. ಅಂದರೆ ಇಸ್ವಿ ಮತ್ತು ಹೆಸರುಗಳು ಮಾತ್ರ ಸತ್ಯವಿರುತ್ತದೆ. ನಿಜವಾದ

ಇತಿಹಾಸ ಎರಡು ಸಾಲುಗಳ ಮಧ್ಯ ಅಡಗಿರುತ್ತದೆ ಎಂದು ಪ್ರಗತಿಪರ ವಿಚಾರವಾದಿಗಳ ಅಭಿಪ್ರಾಯವಾಗಿದೆ. ಇಂತಹ ಜನಸಾಮಾನ್ಯರ ಕನಸು ನನಸಾಗಬೇಕು. ಅವರ ಜೀವನ ಕೂಡ ಚಾರಿತ್ರಿಕವಾಗಿ ದಾಖಲಿಸಬೇಕಾದುದು ಅವಶ್ಯವಿದೆ. ಇಂತಹ ನಿಲುವನ್ನು ಹೊಂದಿದ ಕರ್ನಾಟಕದ ಅನೇಕ ಅರಸು ಮನೆತನದಲ್ಲಿ ಕಾಣುತ್ತವೆ.

ಈ ಹಿನ್ನೆಲೆಯಲ್ಲಿ ನಾವು ಯಾದಗಿರಿಯನ್ನು ನೋಡಿದಾಗ ಈ ಭಾಗವು ರಾಜಕೀಯವಾಗಿ ಅತ್ಯಂತ ಪ್ರಾಬಲ್ಯ ಹೊಂದಿತೆಂದು ತಿಳಿದುಬರುತ್ತದೆ. ಪ್ರಾಚೀನ ಇತಿಹಾಸವನ್ನು ಅರಿತುಕೊಂಡಾಗ ರಾಷ್ಟ್ರಕೂಟರ ರಾಜಕೀಯ ಚರಿತ್ರೆ ಮಹತ್ವದ್ದಾಗಿದೆ. ತದನಂತರ ಕಲ್ಯಾಣಚಾಲುಕ್ಯರ ಇತಿಹಾಸವು ಈ ಭಾಗದಲ್ಲಿ ಅಜರಾಮರವಾಗಿದೆ. ಇದಕ್ಕೆ ಅನೇಕ ಶಾಸನಗಳು ಪುಷ್ಟಿ ನೀಡುತ್ತವೆ. ಯಾದಗಿರಿಯನ್ನು ಮೌರ್ಯರು, ಗುಪ್ತರು, ಶಾತವಾಹನರು, ಬಾದಾಮಿ ಚಾಲುಕ್ಯರು ಅಪರೋಕ್ಷವಾಗಿ ಆಳ್ವಿಕೆ ಮಾಡಿದ್ದರೂ ಕೂಡ, ಕಲ್ಯಾಣ ಚಾಲುಕ್ಯ ಕಲಚೂರಿ ಅರಸರು, ಯಾದವರು, ವಿಜಯನಗರ ಅರಸರು, ಮುಸ್ಲಿಂ ದೊರೆಗಳು ನೇರ ರಾಜಕೀಯ ಆಡಳಿತ ನಡೆಸಿದ್ದಾರೆ. ಹೀಗಾಗಿ ಪ್ರಾಚೀನ ಕರ್ನಾಟಕದ ಇತಿಹಾಸದೊಂದಿಗೆ ಯಾದಗಿರಿ ಪರಿಸರವೇ ಮಹತ್ವ ಹೊಂದಿದೆ ಎಂಬುದನ್ನು ಪ್ರತಿಬಿಂಬಿಸುತ್ತದೆ.

**ಮೌರ್ಯರು:**

ಯಾದಗಿರಿಯಿಂದ ಉತ್ತರಕ್ಕೆ ಸುಮಾರು ೩೦ ಕಿ.ಮೀ. ಅಂತರದಲ್ಲಿ ಸನ್ನತಿ ಗ್ರಾಮವಿದೆ. ಇದು ಈಗಾಗಲೇ ಬೌದ್ಧರ ಪ್ರಾಚೀನ ಕೇಂದ್ರವಾಗಿತ್ತೆಂದು ಇತಿಹಾಸದ ಪುಟದಿಂದ ಸ್ಪಷ್ಟವಾಗುತ್ತದೆ. ಮೌರ್ಯರ ಅರಸ ಅಶೋಕನ ಎರಡು ಶಾಸನಗಳು ಸನ್ನತಿಯಲ್ಲಿ ದೊರೆತಿವೆ. ಅಲ್ಲಿ ಬೌದ್ಧಸ್ತೂಪ, ಶಿಲ್ಪಗಳು ಈಗಲೂ ಸಾಕ್ಷಿಯಾಗಿ ನಿಂತಿವೆ. ಈಗಾಗಲೇ ದಕ್ಷಿಣ ಭಾರತದಲ್ಲಿ ಅಶೋಕನ ೮ ಶಾಸನಗಳು ದೊರೆಕಿವೆ. ಆ ಎಂಟರಲ್ಲಿ ಆರು ಕರ್ನಾಟಕದಲ್ಲಿವೆ. ಕೊಪ್ಪಳದಲ್ಲಿ ಎರಡು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪೂರ, ಜಟಿಂಗ ರಾಮೇಶ್ವರದಲ್ಲಿ ಒಂದೊಂದು ಶಾಸನಗಳಿವೆ. ಮಸ್ಕಿಯಲ್ಲಿ ಲಘು ಪ್ರಸಾರದ ಶಾಸನಗಳಿವೆ. ಯಾದಗಿರಿಯ ಸಮೀಪದಲ್ಲಿರುವ ಸನ್ನತಿಯಲ್ಲಿಯೂ ಸಹ ಎರಡು ಶಾಸನಗಳು ದೊರಕಿವೆ. ಸನ್ನತಿಯು ಅಶೋಕನ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿಯೇ ಒಂದು ಪ್ರಮುಖ ಪಟ್ಟಣವಾಗಿದ್ದಿತ್ತೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಅಂದಿನ ಸಂದರ್ಭದಲ್ಲಿ ಅಶೋಕನ ಸಾಮ್ರಾಜ್ಯ ಬಹಳ ವಿಸ್ತಾರವಾಗಿ ಹಬ್ಬಿತೆಂದು ತಿಳಿದುಬರುತ್ತದೆ. ಉತ್ತರ ಕರ್ನಾಟಕದ ಭಾಗವೆಲ್ಲಾ ಮೌರ್ಯ ಸಾಮ್ರಾಜ್ಯದ ಭಾಗವಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. "ಸನ್ನತಿ ಆ ಕಾಲದ ಪ್ರಸಿದ್ಧ ಹಾಗೂ ಐತಿಹಾಸಿಕ ದಾಖಲೆ ಒದಗಿಸುವ ಪ್ರಮುಖ ಬೌದ್ಧಕೇಂದ್ರವಾಗಿದೆ. ಅಶೋಕನು ಈ ಪ್ರದೇಶದ ಮೇಲೆ ಒಂದೇ ಒಂದು ಯುದ್ಧ

ಮಾಡಿದ್ದಾನೆ. ಅದು ಕಳಿಂಗ ಯುದ್ಧ. ಆ ಯುದ್ಧದಲ್ಲಿ ರಕ್ತಪಾತ, ಸಾವು ನೋವಿನಿಂದ, ಅಸಂಖ್ಯಾತ ಮಕ್ಕಳು, ಸ್ತ್ರೀಯರು, ನಿರ್ಗತಿಕರಾದುದನ್ನು ಕಂಡ ಅಶೋಕ ಸಾಮ್ರಾಟನು ತನ್ನ ಅಗಾಧ ತಪ್ಪಿನ ಅರಿವಾಗಿ ಇನ್ನು ಮುಂದೆ ಇಂತಹ ವಿಜಯ ಯಾತ್ರೆಗಾಗಿ ಯುದ್ಧಗಳನ್ನು ಮಾಡುವುದಿಲ್ಲವೆಂದು, ಅದರ ಬದಲಿಗೆ ಈ ದೇಶದ ಪ್ರಜೆಗಳ ಉನ್ನತಿಗೋಸ್ಕರ ಸಾಮ್ರಾಜ್ಯದ ಧರ್ಮ, ನೀತಿ, ಪ್ರಚಾರ ಮಾಡುತ್ತಾ 'ಧರ್ಮಯಾತ್ರೆ' ಮಾಡುವುದಾಗಿ ಪಣತೊಟ್ಟನು. ನೋವಿನಿಂದ ಬಳಲಿದ ಜನರಿಗೆ ಸಾಂತ್ವನ ಹೇಳಿದನು. ಇವೆಲ್ಲಾ ವಿಷಯವನ್ನೊಳಗೊಂಡ ಎರಡು ಶಾಸನಗಳು ಸನ್ನತಿಯಲ್ಲಿ ದೊರಕುತ್ತವೆ."[೧೧] ಇದನ್ನು ನೋಡಿದಾಗ ಅಶೋಕ ಸಾಮ್ರಾಟನು ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಪ್ರಥಮ ಪ್ರಭು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಹೀಗೆ ಅಶೋಕ ಸಾಮ್ರಾಟನ ಈ ಎರಡು ಶಾಸನಗಳು ಆತನ ದಯೆ, ಕರುಣೆ, ಪ್ರೀತಿಯನ್ನು ಪ್ರತಿನಿಧಿಸುತ್ತವೆ.

**ಶಾತವಾಹನರು:**

ಅಶೋಕ ಸಾಮ್ರಾಟನ ಕಾಲಕ್ಕೆ ಬೌದ್ಧಧರ್ಮವು ಬಹಳ ಪ್ರಚಾರದಲ್ಲಿತ್ತು. ಆತನು ಬೌದ್ಧಧರ್ಮ ಪ್ರಚಾರ ಮಾಡುತ್ತಲೇ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಸನ್ನತಿ ಆತನ ಸಾಮ್ರಾಜ್ಯದಲ್ಲಿಯೇ ಒಂದು ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಮೌರ್ಯರ ನಂತರದಲ್ಲಿ ಈ ಭಾಗವನ್ನು ಆಳ್ವಿಕೆ ಮಾಡಿದವರೆಂದರೆ ಶಾತವಾಹನರು. ಸನ್ನತಿಯಲ್ಲಿ ಆಗಿನ ಕಾಲದ ಶಾತವಾಹನರು ಅನೇಕ ಅವಶೇಷಗಳು ನಮಗೆ ದೊರಕುವವು. ಅವರ ಮೂಲ ಸ್ಥಳ ಈಗಿನ ಬಳ್ಳಾರಿ ಜಿಲ್ಲೆಯ ಉತ್ತರ ಭಾಗದಲ್ಲಿತ್ತೆಂದು ರಾಬರ್ಟ್ ಸಿವೆಲ್ ಅವರು ಅಭಿಪ್ರಾಯಪಡುತ್ತಾರೆ. ಯಾದಗಿರಿ ಮತ್ತು ಸನ್ನತಿ ೩೦ ಕಿ.ಮೀ. ಅಂತರದಲ್ಲಿದ್ದುದರಿಂದ ಸಹಜವಾಗಿ ಸನ್ನತಿಯಿಂದ ಯಾದಗಿರಿಯನ್ನು ಸಹ ಶಾತವಾಹನರು ಆಳ್ವಿಕೆಗೊಳಪಡಿಸಿಕೊಂಡಿರಬೇಕೆಂದು ಊಹಿಸಲಾಗಿದೆ. "ಸನ್ನತಿಯಲ್ಲಿ ಈಗಲೂ ಜನವಸತಿಯ ವಸ್ತು ಅವಶೇಷಗಳಿವೆ. ಉತ್ಖನನದಲ್ಲಿ ನದಿಯ ದಂಡೆಯ ಮೇಲಿದ್ದ ಒಂದು ಉಗ್ರಾಣವೆನ್ನಬಹುದಾದ ಇಟ್ಟಿಗೆಯ ಕಟ್ಟಡವು ಬೆಳಕಿಗೆ ಬಂದಿದೆ. ರಕ್ಷಣಾ ಗೋಡೆ, ಬೌದ್ಧಸ್ತೂಪ, ಸ್ತೂಪದ ಮೇಲಿನ ಅಲಂಕೃತ ಫಲಕಗಳು ಇಲ್ಲಿವೆ. ಶಾತವಾಹನರ ಅರಸರಲ್ಲಿ ಪ್ರಸಿದ್ಧರಾದ ಗೌತಮಿ ಪುತ್ರ ಶಾತಕರ್ಣಿ ಮತ್ತು ವಸಿಷ್ಠ ಪುತ್ರ, ಪುಳುಮಾವಿ, ಮುಂತಾದವರು ಈ ಪ್ರದೇಶವನ್ನು ಆಳ್ವಿಕೆ ಮಾಡಿದ್ದರೆಂಬುದನ್ನು ನಾವು ಶಾಸನಾಧಾರಗಳಿಂದ ತಿಳಿಯ ಬಹುದಾಗಿದೆ."[೧೨] ಈಗಲೂ ಶಿಲ್ಪಗಳಲ್ಲಿ ಜೋಡಿ ಬುದ್ಧಪಾದಸಹಿತ, ವಜ್ರಾಸನ, ಮುಚಲಿಂಗನಾಗ, ಯಕ್ಷ ಶಿಲ್ಪಗಳು, ದಾನ ಫಲಕಗಳು, ಸ್ಮಾರಕ ಶಿಲೆಗಳು, ಇಂತಹ ನಾನಾ ತರಹದ ಶಿಲ್ಪಗಳು ಇವೆ. ಹೀಗೆ ಶಾತವಾಹನರ ಕಾಲದಲ್ಲಿ ಈ ಪ್ರದೇಶವು ಕಲೆಯಲ್ಲಾಗಲಿ, ಧರ್ಮದಲ್ಲಾಗಲಿ ಸುಪ್ರಸಿದ್ಧವಾಗಿತ್ತು. ಇಡೀ ಕರ್ನಾಟಕದಲ್ಲಿ ಶಾತವಾಹನರ ಕಲೆ ಅದರಲ್ಲೂ ವಿಶೇಷವಾಗಿ ಬೌದ್ಧ ಪಂಥ ಕಲೆಗೆ ಅತೀ ಮಹತ್ವದ ಏಕೈಕ ಸ್ಥಳವೆಂದರೆ, ಗುಲಬರ್ಗಾ ಪ್ರದೇಶದ ಸನ್ನತಿ. ಈ ಅರಸರ ಆಳ್ವಿಕೆ ಯಾದಗಿರಿ ಭಾಗಕ್ಕೆ ಆಗಿದೆ. ಎಂಬುದರಲ್ಲಿ ಎರಡು ಮಾತಿಲ್ಲ.

**ಬಾದಾಮಿ ಚಾಲುಕ್ಯರು:**

"ಕರ್ನಾಟಕದ ಇತಿಹಾಸಕ್ಕೆ ಬಾದಾಮಿ ಚಾಲುಕ್ಯರ ಕೊಡುಗೆ ಅತ್ಯಂತ ಮಹತ್ವದ್ದಾಗಿದೆ. ಕದಂಬರ ಪತನದ ನಂತರ ಬಾದಾಮಿ ಚಾಲುಕ್ಯರು ಪ್ರಬಲರಾಗಿ ಕ್ರಿ.ಶ. ೫೪೦ರಿಂದ ೭೫೩ರವರೆಗೆ ಕರ್ನಾಟಕವನ್ನು ಏಕೈಕ ಆಡಳಿತಕ್ಕೆ ಒಳಪಡಿಸಿದರು."[೧೩] ಇಡೀ ಗುಲಬರ್ಗಾ ಜಿಲ್ಲೆಯಲ್ಲಿಯೇ ಅವರ ಕಾಲದ ಶಾಸನಗಳಾಗಲೀ ಅಥವಾ ಯಾವುದೇ ಅವಶೇಷಗಳಾಗಲಿ ದೊರುಕುವುದಿಲ್ಲ. ಹೀಗಾಗಿ ಯಾದಗಿರಿ ಸುತ್ತಮುತ್ತ ಬಾದಾಮಿ ಚಾಲುಕ್ಯರ ಅವಶೇಷಗಳು, ಕುರುಹುಗಳು ಯಾವುದೇ ಭಾಗದಲ್ಲಿ ಲಭ್ಯವಿಲ್ಲ.

**ರಾಷ್ಟ್ರಕೂಟರು:**

ಬಾದಾಮಿ ಚಾಲುಕ್ಯರ ತರುವಾಯ ಕರ್ನಾಟಕದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡವರು ರಾಷ್ಟ್ರಕೂಟರು. ಇವರ ರಾಜಧಾನಿ ಮಾನ್ಯಖೇಟ (ಈಗಿನ ಮಳಖೇಡ) ಇವರ ಮೂಲ ಪುರುಷ ದಂತಿದುರ್ಗ. "ಈತನು ಕ್ರಿ.ಶ. ೭೫೬ರಲ್ಲಿ ಬಾದಾಮಿ ಚಾಲುಕ್ಯರ ಆಡಳಿತವನ್ನು ತೊಡೆದುಹಾಕಿ ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪನೆಯನ್ನು ಮಾಡಿದನು. ರಾಷ್ಟ್ರಕೂಟ ಎಂಬುದು ಮೊದಲು ಅಧಿಕಾರ ಹುದ್ದೆಯಾಗಿದ್ದು ಕಾಲಕ್ರಮೇಣ ಒಂದು ಕುಟುಂಬದ ಹೆಸರಾಯಿತೆಂದು ಪಿ.ಬಿ. ದೇಸಾಯಿಯವರು ತಿಳಿಸುತ್ತಾರೆ."[೧೪] "ರಾಷ್ಟ್ರಕೂಟರ ಕಾಲವನ್ನು ಕರ್ನಾಟಕದ ಅಧಿಕಾರತ್ವದ ಕಾಲ ಎಂದು ಕರೆಯಲಾಗಿದೆ."[೧೫] ಕರ್ನಾಟಕದ ಉಜ್ವಲ ಸಂಸ್ಕೃತಿಯನ್ನು ಬೆಳಗಿಸಿದವರು ರಾಷ್ಟ್ರಕೂಟರು. ಇವರು ಲಾಂಛನ ಗರುಡವಾಗಿದೆ.

"ದಂತಿದುರ್ಗನಿಗೆ ಮಕ್ಕಳಿರಲಿಲ್ಲದ ಕಾರಣ ಆತನ ಚಿಕ್ಕಪ್ಪನಾದ ೧ನೆಯ ಕೃಷ್ಣನು ರಾಜನಾದನು. ಈತನಿಗೆ ಧೃವ ಎಂಬ ಮಗನಿದ್ದನು. ಧೃವ ಅಪಾರ ಪರಾಕ್ರಮಶಾಲಿಯಾಗಿದ್ದನು. ಧ್ರುವ ಮತ್ತು ಶೀಲಭಚ್ಚಾರಿಕೆ ದಂಪತಿಗಳ ಮಗನಾದ ಮೂರನೇ ಗೋವಿಂದನನ್ನು ಪ್ರಭೂತ ವರ್ಷಗೊಂಡ ಎಂದು ಶಾಸನದಲ್ಲಿ ಕರೆದಿದೆ."[೧೬] ಈತನು ಎಲ್ಲಾ ದಿಕ್ಕುಗಳಿಗೂ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿ, ವಿಸ್ತರಿಸಿದನು. ದಕ್ಷಿಣದಲ್ಲಿ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಆರಿಸಿಕೊಂಡನೆಂದು ಅಭಿಪ್ರಾಯವಿದೆ.

ಮೂರನೆಯ ಗೋವಿಂದನು ಅತ್ಯಂತ ಬಲಶಾಲಿಯಾಗಿದ್ದನು. ತನ್ನ ಶಕ್ತಿ, ಶೌರ್ಯ ಮತ್ತು ಪರಾಕ್ರಮಗಳಿಂದ ಜಗತ್ತನ್ನೇ ಜಯಿಸಿದ್ದನು. ಈತನ ಆಡಳಿತ ಅವಧಿಯಲ್ಲಿ ಅನೇಕ ಗಿರಿದುರ್ಗಗಳನ್ನು ಆಕ್ರಮಿಸಿಕೊಂಡಿದ್ದನು. ಅದೇ ಸಂದರ್ಭದಲ್ಲಿ ಮಾನ್ಯಖೇಟದ ಸಮೀಪ ೫೦ ಕೀ.ಮೀ. ಅಂತರದಲ್ಲಿದ್ದ ಗಿರಿದುರ್ಗ ಯಾದಗಿರಿಯನ್ನು ತನ್ನ ವಶಕ್ಕೆ ತೆಗೆದುಕೊಂಡಿರಬಹುದೆಂದು ಊಹಿಸಲಾಗಿದೆ. ಇದಕ್ಕೆ ಯಾವುದೇ ಪುರಾವೆಗಳು ಲಭ್ಯವಾಗಿಲ್ಲ. ಹೀಗಾಗಿ ಇವರ ಕೀರ್ತಿ

ಕರ್ನಾಟಕದಲ್ಲಿ ಅಷ್ಟೇ ಅಲ್ಲ ಭಾರತದಾದ್ಯಂತ ಪಸರಿಸಿತ್ತು. ಸುಮಾರು ೨೨೫ ವರ್ಷಗಳಷ್ಟು ದೀರ್ಘ ಕಾಲದವರೆಗೂ ರಾಷ್ಟ್ರಕೂಟರು ಸಾರ್ವಭೌಮತೆ ಮತ್ತು ಆಡಳಿತದ ಪ್ರಭುತ್ವದೊಂದಿಗೆ ಕರ್ನಾಟಕವನ್ನಾಳಿದರು. ರಾಜಕೀಯದಲ್ಲಿಯಂತೂ ಅವರ ಸೇವೆ ಅಪ್ರತಿಮವಾಗಿದೆ. ಈ ದಿಸೆಯಲ್ಲಿ ರಾಷ್ಟ್ರಕೂಟರ ಕೀರ್ತಿ ಕರ್ನಾಟಕದ ಒಳಗೂ ಹೊರಗೂ ಹಬ್ಬಿದೆ.

ಮೂರನೇ ಗೋವಿಂದ ಮಗನಾದ ಅಮೋಘವರ್ಷ ನೃಪತುಂಗನು ಕ್ರಿ.ಶ. ೮೧೪-೮೭೭ರಲ್ಲಿ ಅಧಿಕಾರಕ್ಕೆ ಬಂದು ಸಾರ್ವಭೌಮನಾಗಿ ಮೆರೆದನು. ಅಮೋಘವರ್ಷ ನೃಪತುಂಗನು ಸ್ವತಃ ವಿದ್ವಾಂಸನಾಗಿದ್ದನು. ಈತನ ಆಸ್ಥಾನದಲ್ಲಿ ಅನೇಕ ಜನ ಕವಿಗಳು, ಪಂಡಿತರು ಆಶ್ರಯವನ್ನು ಪಡೆದಿದ್ದರು. ರಾಷ್ಟ್ರಕೂಟರ ಶ್ರೇಷ್ಠ ದೊರೆ ಎನಿಸಿಕೊಂಡ ಅಮೋಘವರ್ಷ ನೃಪತುಂಗನು ತಾನು ಮಾಡಿದ ಪರಾಕ್ರಮಗಳಿಂದ ಕೀರ್ತಿಶಾಲಿಯಾದ ದೊರೆ ಎನಿಸಿದ್ದನು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಕವಿರಾಜ ಮಾರ್ಗ'ದ ಸ್ಥಾನ ಅತ್ಯಂತ ಮಹತ್ವದ್ದಾಗಿದೆ. "ಈ ಉತ್ಕೃಷ್ಟವಾದ ಮೊಟ್ಟಮೊದಲ ಆಸ್ಥಾನದಲ್ಲಿ ಇದರ ರಚನೆಯಾದದ್ದು ಅಮೋಘವರ್ಷ ನೃಪತುಂಗನ ಆಸ್ಥಾನದಲ್ಲಿ. ಇದರ ಕರ್ತೃ ಶ್ರೀವಿಜಯ. ನೃಪತುಂಗನ ಆಶ್ರಯದಲ್ಲಿದ್ದ ಶ್ರೀ ವಿಜಯನು ಕನ್ನಡ ನಾಡಿನ ವಿಸ್ತಾರದ ಬಗ್ಗೆ ಬಹಳ ಅಭಿಮಾನದಿಂದ ಹೇಳುತ್ತಾನೆ.

ಕಾವೇರಿಯಿಂದ ಮಾ ಗೋ

ದಾವರಿವರಮಿರ್ದ ನಾಡದಾ ಕನ್ನಡದೊಳ್ ॥

ಭಾವಿಸಿದ ಜನಪದಂವಸು

ದಾವಳಯ ವಿಲೀನ ವಿಶದ ವಿಷಯ ವಿಶೇಷಂ॥"[೧೭]

ಎಂದು ಅಂದಿನ ಕನ್ನಡ ನಾಡಿನ ವಿಸ್ತಾರದ ಬಗ್ಗೆ ವರ್ಣಿಸಿದ್ದಾನೆ. ಕನ್ನಡ ನಾಡು ಕಾವೇರಿ ನದಿಯಿಂದ ಗೋದಾವರಿಯವರೆಗೆ ವಿಶಾಲವಾಗಿ ಹಬ್ಬಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇಂತಹ ವಿಶಾಲವಾದ ನಾಡಿನಲ್ಲಿ ಯಾದಗಿರಿ ಪ್ರದೇಶವೂ ಒಂದು ಇದ್ದಿತ್ತೆಂದು ನಮಗೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಯಾದಗಿರಿ ಪ್ರದೇಶವು ಮಾನ್ಯಖೇಟದಿಂದ ಕೇವಲ ೫೦ ಕಿ.ಮೀ. ಅಂತರದಲ್ಲಿದ್ದ ಕಾರಣ ಸಹಜವಾಗಿ ಅದರ ಕೀರ್ತಿ ಯಾದಗಿರಿ ಪ್ರದೇಶಕ್ಕೂ ಅನ್ವಯಿಸುತ್ತದೆ. ರಾಷ್ಟ್ರಕೂಟರ ಆಳ್ವಿಕೆ ಯಾದಗಿರಿ ಪ್ರದೇಶದ ಮೇಲೂ ಸಾಕಷ್ಟು ಇದ್ದಿರಬೇಕು. ಏಕೆಂದರೆ ಇಲ್ಲಿನ ಗಿರಿದುರ್ಗವನ್ನು ನೋಡಿದಾಗ ಯಾದಗಿರಿಯ ಸುತ್ತಲಿನ ಪ್ರದೇಶದಲ್ಲಿ ಜೈನ ವಿಗ್ರಹಗಳು, ಬಸದಿಗಳು, ಶಾಸನಗಳು ನಮಗೆ ಹೆಚ್ಚಿನ ಮಾಹಿತಿ ಒದಗಿಸುತ್ತವೆ. ಆದರೆ ಖಚಿತವಾಗಿ ಹೇಳುವುದಾದರೆ, ರಾಷ್ಟ್ರಕೂಟರ ಶಾಸನಗಳು ಈ ಪ್ರದೇಶದಲ್ಲಿ ಲಭ್ಯವಾಗಿಲ್ಲ. ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳೇ ಸಾಕಷ್ಟು ದೊರೆತಿವೆ. ರಾಷ್ಟ್ರಕೂಟರ ಕಾಲದಲ್ಲಿ ಜೈನಧರ್ಮ ಸಾಕಷ್ಟು

ಪಸರಿದ್ದ ಕಾರಣ ಇಲ್ಲಿ ರಾಷ್ಟ್ರಕೂಟರ ಪ್ರಭಾವ ಅವರ ಆಳ್ವಿಕೆ ಈ ಪ್ರದೇಶದ ಮೇಲೆ ನಡೆದಿರಬೇಕೆಂದು ಭಾವಿಸಲಾಗಿದೆ. ಅಮೋಘವರ್ಷ ನೃಪತುಂಗನ ಕಾಲಕ್ಕೆ ಈ ಪ್ರದೇಶ ಅತ್ಯಂತ ಶ್ರೀಮಂತ ಹಾಗೂ ಸಾಂಸ್ಕೃತಿಕ ಸಮೃದ್ಧ ಪ್ರದೇಶವಾಗಿತ್ತು.

"ಅಮೋಘವರ್ಷ ನೃಪತುಂಗನ ೮೭೮ರಲ್ಲಿ ನಿಧಾನವಾದಾಗ, ಅವನ ಮಗ ಇಮ್ಮಡಿ ಕೃಷ್ಣನು ಅಧಿಕಾರಕ್ಕೆ ಬಂದನು."[೧೮] "ಈತನು ತಂದೆಯಂತೆ ಮಹಾಪರಾಕ್ರಮಿ ಅರಸನಾಗಿದ್ದನು. ಈತನಿಗೂ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ ಭಟ್ಟಾರ ಎಂದು ವೆಂಕಟಾಪುರ ಶಾಸನದಿಂದ ತಿಳಿಯುತ್ತದೆ."[೧೯] ಈತನು ಪೂರ್ವದ ಚಾಲುಕ್ಯರು ಗೂರ್ಜರು ಪ್ರತೀಹಾರರು ಮತ್ತು ಚೋಳರ ಮೇಲೆ ಕರಾಳ ಹಾಗೂ ಸುದೀರ್ಘವಾದ ಯುದ್ಧ ಮಾಡಬೇಕಾಯಿತು. ಕ್ರಿ.ಶ. ೯೧೪ರಲ್ಲಿ ಈತನ ಆಳ್ವಿಕೆ ಕೊನೆಗೊಳ್ಳುತ್ತದೆ.[೨೦] ಹೀಗೆ ಇಮ್ಮಡಿ ಕೃಷ್ಣನು ಮಹಾಶೂರನಾಗಿದ್ದು, ತನ್ನ ಪರಾಕ್ರಮಗಳಿಂದ ಕ್ರಿ.ಶ. ೮೭೮-೯೧೪ರವರೆಗೆ ಆತನು ರಾಜ್ಯವಾಳಿದನು.

ಈ ನಾಡನ್ನಾಳಿದ ರಾಷ್ಟ್ರಕೂಟರ ವಂಶಾವಳಿ ಈ ರೀತಿಯಾಗಿ ಗುರುತಿಸಬಹುದು.




## ೨.೩. ೧೦ನೆಯ ಶತಮಾನದಿಂದ ಆಧುನಿಕ ಇತಿಹಾಸದವರೆಗೆ

### ಕಲ್ಯಾಣಿ ಚಾಲುಕ್ಯರು

ಕಲ್ಯಾಣಿ ಚಾಲುಕ್ಯರ ನೂರಾರು ಶಾಸನಗಳು ಕಲಬುರ್ಗಿ ಜಿಲ್ಲೆಯಲ್ಲಿ ದೊರೆತಿವೆ. ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದ ಕಲ್ಯಾಣಿ ಚಾಲುಕ್ಯರು ಕ್ರಿ.ಶ. ೯೭೩ರಲ್ಲಿ ಮಾನ್ಯಖೇಟದಲ್ಲಿ ಅಧಿಕಾರ ಗ್ರಹಣ ಮಾಡಿದ. ಸಾಮ್ರಾಜ್ಯವನ್ನು ಸ್ಥಾಪಿಸಿದ ಎರಡನೆಯ ಕೀರ್ತಿ ತೈಲಪನಿಗೆ ಸಲ್ಲುತ್ತದೆ.

"ನಾಸ್ತೀದಸ್ತಿ ಭವಿಷ್ಯತಿ ಕ್ಷಿತಿತಲೇಕ ಕಲ್ಯಾಣ ಕಲ್ಪಂ ಪುರಂ ನೋದ್ರಷ್ಟಃ ಶ್ರುತ ಏವವಾಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮಂ ಎಂದರೆ ಈ ಭೂಮಂಡಲದ ಮೇಲೆ ಕಲ್ಯಾಣದಂಥ ನಗರ ಹಿಂದಿರಲಿಲ್ಲ ಮುಂದಿರಲಾರದು. ವಿಕ್ರಮಾದಿತ್ಯನಂಥ ಪ್ರಭು ಹಿಂದಿರಲಿಲ್ಲ. ಹಾಗೂ ಮುಂದೆ ಬರಲಾರನೆಂದೂ ಪ್ರತ್ಯಕ್ಷವಾಗಿ ಕಂಡು ವಿಜ್ಞಾನೇಶ್ವರನು ತನ್ನ ಮಿತಾಕ್ಷರಿ ಧರ್ಮಶಾಸ್ತ್ರ ಕಾನೂನು ಗ್ರಂಥದಲ್ಲಿ ವರ್ಣಿಸಿರುವನು."[೨೧] ಯಾದಗಿರಿಗೂ ಮರ್ತೂರಿಗೂ ಸುಮಾರು ೭೦ ಕಿ.ಮೀ. ಅಂತರವಿರುವುದರಿಂದ ಇಂತಹ ಒಬ್ಬ ಅದ್ಭುತ ದಕ್ಷ ಆಡಳಿತಗಾರ ರಾಜನ ಆಡಳಿತದಲ್ಲಿ ಯಾದಗಿರಿಯೂ ಒಳಪಟ್ಟಿದೆ. ಕರ್ನಾಟಕದ ಇತಿಹಾಸದಲ್ಲಿಯೇ ಕಲಬುರ್ಗಿ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಆಡಳಿತ ಅಪೂರ್ವವಾದುದ್ದಾಗಿದೆ. ಇಂದಿನ ಬೀದರ ಜಿಲ್ಲೆಯ ಬಸವಕಲ್ಯಾಣವನ್ನೇ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೆಂದು ಅನೇಕ ಶಾಸನಗಳು ಸ್ಪಷ್ಟಿಕರೀಸುವೆ. ವಿಜ್ಞಾನೇಶ್ವರ ರಚಿಸಿದ ಮಿತಾಕ್ಷರಿ ಗ್ರಂಥದ ಮಾತುಗಳೇ ಸಾಕ್ಷಿ ನೀಡುತ್ತದೆ. ಈ ಭಾಗದ ಅನೇಕ ಶಾಸನಗಳು ಕಲ್ಯಾಣ ಚಾಲುಕ್ಯರ ಆಡಳಿತದ ಕುರಿತು ಹೊಸ ಬೆಳಕು ಚೆಲ್ಲುತ್ತವೆ. ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿ ಮಾಡಿಕೊಂಡಂತೆ ಅವರ ಸಾಮಂತರಾಗಿದ್ದ ಇವರೂ ಸಹ ತಮ್ಮ ರಾಜಕೀಯ ಅಧಿಕಾರ ಗ್ರಹಣ ಹಿಡಿದುಕೊಂಡು ಬೀದರ ಜಿಲ್ಲೆಯ ಬಸವಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಂಡು ತಮ್ಮ ಆಡಳಿತವನ್ನು ಮುಂದುವರಿಸಿದರು. ಇಂತಹ ವಿಷಯ ಕುರಿತು ಯಾದಗಿರಿಯ ಶಾಸನಗಳು ಚಾಲುಕ್ಯರ ಆಡಳಿತದ ಬಗ್ಗೆ ಖಚಿತ ಮಾಹಿತಿ ನೀಡುತ್ತವೆ.

ಯಾದಗಿರಿ ತಾಲ್ಲೂಕಿನಲ್ಲಿ ಕಲ್ಯಾಣ ಚಾಲುಕ್ಯರ ಆಡಳಿತದ ಕುರಿತಾದ ಶಾಸನಗಳು ಸುಮಾರು ೧೪ ದೊರೆತಿವೆ. ಅವುಗಳಲ್ಲಿ ಅಧಿಕವಾದವುಗಳು ಆರನೆಯ ವಿಕ್ರಮಾದಿತ್ಯನ ಆಡಳಿತ ಕುರಿತು ಉಲ್ಲೇಖವಾಗಿದೆ. ನಂತರ ಇಮ್ಮಡಿ ಜಯಸಿಂಹನ ಮತ್ತು ಒಂದನೆಯ ಸೋಮೇಶ್ವರನ ಶಾಸನಗಳು ಕೇವಲ ಒಂದೆರಡು ಲಭ್ಯವಾಗಿವೆ. ಚಾಲುಕ್ಯರ ಎರಡನೆಯ ತೈಲಪನ ಹೆಚ್ಚು ಶಾಸನಗಳು ಬಗ್ಗೆ ಈ ಪ್ರದೇಶದಲ್ಲಿ ಲಭ್ಯವಾಗಿಲ್ಲ. ಆದರೂ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಎರಡನೆಯ ತೈಲಪನ ಬಗೆ ಹೇಳಲೇಬೇಕಾಗುತ್ತದೆ.

"ಚಾಲುಕ್ಯ ತೈಲಪನು ತನ್ನ ಆರಂಭದ ಆಡಳಿತದಲ್ಲಿಯೇ ಬ್ರಹ್ಮಾಂಡಕ್ರತು ಎಂಬ ಯಾಗವನ್ನು ಮಾಡಿದ್ದಾನೆ. ಅಂದರೆ ರಾಷ್ಟ್ರಕೂಟ ಅರಸರನ್ನು ಸೋಲಿಸಿ ತಾನು ಪಟ್ಟಕ್ಕೆ ಬಂದದ್ದನ್ನು ಕಾಣುತ್ತದೆ. ಈ ದಿಸೆಯಲ್ಲಿ ಚಾಲುಕ್ಯ ತೈಲಪ (ಎರಡನೆಯ ತೈಲಪ) ಚಾಲುಕ್ಯಭರಣ ಪಾಂಚಾಲ ಮಥೋಭವ ಪಾಂಚನನ ರಟ್ಟಘರಟ್ಟ ನೂರ್ವದಿತೇಜ ಅಹಮಲ್ಲ ಎಂದು ಮುಂತಾದ ಹೆಸರುಗಳಿಂದ ಕರೆಯಲಾಗಿದೆ. (ಹೊಸರು ಶಾಸನ ೪೭) ಇದೇ ಪ್ರಕಾರ ಈತನಿಗೆ ಸಮಸ್ತಭುವನಾಶ್ರಯ ಶ್ರೀ ಪೃಥ್ವಿ ವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ ಭಟ್ಟಾರಕ,

ಸತ್ಯಾಶ್ರಯ ಕುಲತಿಲಕ, ಚಾಲುಕ್ಯಾಭರಣ, ಅಹವಮಲ್ಲ ದೇವರು ಎಂದು (ಹೊಸೂರು ಶಾಸನ ೪೭) ಉಲ್ಲೇಖಿಸುತ್ತದೆ. ಜೊತೆಯಲ್ಲಿಯೇ ಈತನು ಪಾದಪದ್ಮೋಪ ಜೀವಿಯಾಗಿದ್ದು, ಬೆಳ್ವೊಲ ೨೦೦ರಲ್ಲಿ ಎರಡುನೂರನ್ನು ಮಹಾಸಾಮಂತನಾಗಿ ಆಳುತ್ತಿದ್ದವನು ಶೋಭನರಸ ೩ ಎಂದು ಹೊಸೂರು ಶಾಸನ ಹೇಳುತ್ತದೆ. ಎರಡನೆಯ ತೈಲಪನ ನಂತರ ಅವನ ಮಗ ಇರಿವಬೆಡಂಗ ಸತ್ಯಾಶ್ರಯನ ೯೯೨ರಲ್ಲಿ ಅಧಿಕಾರಕ್ಕೆ (ಹೊಸೂರು ಶಾಸನ ೬೫) ಬಂದನು ಎಂದು ತಿಳಿದುಬರುತ್ತದೆ."[೨]

"ಶಾಸನಗಳಲ್ಲಿ ಒಂದನೆಯ ಜಗದೇಕಮಲ್ಲನನ್ನು ತ್ರಿಭುವನ ಮಲ್ಲದೇವ ಎರಡನೆಯ ಜಯಸಿಂಹ ಎಂದೂ ಕರೆಯಲಾಗಿದೆ. ಕ್ರಿ.ಶ. ೧೦೧೯ರ ಮುಳುಗುಂದದ ಅಪ್ರಕಟಿತ ಶಾಸನ. ಈತನು ಚಾಲುಕ್ಯ ಸಾಮ್ರಾಜ್ಯದ ಚಕ್ರವರ್ತಿಯಾಗಿ ಪಟ್ಟಕ್ಕೆ ಬಂದುದನ್ನು ಹೇಳುತ್ತದೆ"[೩]

ಶಹಪೂರ ತಾಲ್ಲೂಕಿನ ಮದ್ದರಕಿ ಗ್ರಾಮದ ಧಮೇತಿ ತೋಟದಲ್ಲಿರುವ ಕ್ರಿ.ಶ. ೧೦೨೭ರ ಶಾಸನವು ಚಾಲುಕ್ಯ ದೊರೆ "ಮಲ್ಲಿಕಾಮೋದ ಜಗದೇಕಮಲ್ಲ ಎಂಬ ಬಿರುದಿನ ಜಯಸಿಂಹನ ರಾಜಧಾನಿ ಏತಗಿರಿಯಾಗಿತ್ತೆಂದು ಉಲ್ಲೇಖಿಸಿದೆ. ಚೋಳರ ದುರಾಕ್ರಮಣಕ್ಕೀಡಾದ ವೈಭವದ ರಾಜಧಾನಿ ಮಾನ್ಯಖೇಟ ಧ್ವಂಸಗೊಂಡಾಗ ಚಾಲುಕ್ಯ ದೊರೆ ಎರಡನೆಯ ಜಯಸಿಂಹನು ಏತಗಿರಿಗೆ ಬಂದು ನೆಲೆಸಿದನು ಮತ್ತು ಏತಗಿರಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನೆಂದೂ ಕ್ರಿ.ಶ. ೧೦೧೯ರ ರೂಗಿ ಶಾಸನ ಮತ್ತು ಕ್ರಿ.ಶ. ೧೦೩೩ರ ಭೆರನಮಟ್ಟಿ ಶಾಸನಗಳು ಪುರಾವೆಗಳನ್ನು ನೀಡುತ್ತಿವೆ."[೪] ಈತನಿಗೆ ವಂಶ ಪಾರಂಪರ್ಯವಾಗಿ ಬಂದ ಸ್ವಸ್ತಿಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ ಪರಮೇಶ್ವರ, ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಲಕ ಚಾಲುಕ್ಯಭರಣಲ ಎಂಬ ಬಿರುದುಗಳಿದ್ದವೆಂದು ಯಾದಗಿರಿ ತಾಲ್ಲೂಕಿನ ಬೆಳಗುಂದಿ ಶಾಸನದಿಂದ ತಿಳಿದುಬರುತ್ತದೆ. ಈ ಬಿರುದುಗಳು ಮುಳಗುಂದದ ಅಪ್ರಕಟಿತ ಶಾಸನದಲ್ಲೂ ಹಾಗೂ ಹೊಸೂರು ಶಾಸನದಲ್ಲೂ ಬಂದಿದೆ. ಜಗದೇಕಮಲ್ಲನ ಕಾಲದಲ್ಲಿ ಏತಗಿರಿಯು ಒಂದು ಪ್ರಮುಖ ರಾಜಕೀಯ ಪ್ರದೇಶವಾಗಿದ್ದು, ಈತನು ರಾಜ್ಯವನ್ನು ಉತ್ತರಾಭಿವೃದ್ಧಿ ಪ್ರವರ್ಧಮಾನಮ ಚಂದ್ರಾರ್ಕತಾರಂಬರಮಾಗಿ ಸಲುಹುತ್ತಿದ್ದನೆಂದು ಬೆಳಗುಂದಿ ಶಾಸನದಿಂದ ತಿಳಿದುಬರುತ್ತದೆ."[೫]

"ಪೊಟ್ಟಳಕೆರೆಯ ನೆಲೇಡಿನೊಳೆ ಸುಸಂಕಥಾ ಸವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಎಂದು ಶಾಸನ ಉಲ್ಲೇಖಿಸುತ್ತದೆ. ಅಂದರೆ ಜಗದೇಕ ಮಲ್ಲನು ಪೊಟ್ಟಳಕೆರೆಯಿಂದ ಸುಖ ಸಂಕಥಾವಿನೋದದಿಂದ ಆಳುತ್ತಿದ್ದನು. ಈತನ ಮಹಾ ಸಾಮಂತರಾದ ಚಟ್ಟರಸರು ಮತ್ತು ಬರ್ಮರಸರು, ಚಕ್ರವರ್ತಿಯ ಫಾಲ್ಗುಣ ಸು(ಶು)ದ್ಧ ಪಾಡಿವಮಾದಿತ್ಯ ವಾರದ ಸೂರ್ಯಗ್ರಹಣ ತತ್ಕಾಲದೊಳೆ ತೊರೆ ಭೀಮರಜೆಯಂ ಮಿನ್ದು ಗೌತಮ ಪಂಡಿತರ ಕಾಲ ಕರ್ಚ್ಚಿ ಪೂವಿನ

ಬೆಳ್ಗುಂದಿಯ ಬ್ರಹ್ಮೇಶ್ವರ ದೇವರ್ಗೆ ಧಾರಾಪೂರ್ವ್ವಕಂ ಮಾಡಿ ಬೆಳ್ಗುಂಡಿಯ ಕೊರವಿಯ ಬಳಿಯೂರ ಮುಂಗಲ್ಲನುಂ ನಾಲ್ಕೂರ ಸೀಮಾಸನಿಯಲಾಬಳಿಯೂರು ಗಡಿಂಬದಲಳೆದು ಕೊಟ್ಟಕರಿಯ ಮತ್ತರ ೩೦೦ಗೆ ಬಣ್ಣ ಸ್ಪುತಿತ ದೇವಾರ್ಚ್ಚನೆಗೆ ಮತ್ತರ ೫೦ ತಪೋಧನರ್ಗ್ಗೆ ವಿದ್ಯಾರ್ತ್ಥಿಗಳ್ಗಂ ಮತ್ತರು ೫೦ ಎಂದು ಬೆಳಗುಂದಿ ಶಾಸನ ಹೇಳುತ್ತದೆ. ಸೂರ್ಯ ಗ್ರಹಣದ ದಿನ ಭೀಮರಥಿಯ ಸ್ನಾನಮಾಡಿ ಬೆಳ್ಗುಂದೆಯ ಬ್ರಹ್ಮೇಶ್ವರ ದೇವರಿಗೆ, ತಪೋಧನರಿಗೆ, ವಿದ್ಯಾರ್ಥಿಗಳಿಗೆ, ಗೌತಮ ಪಂಡಿತರ ಕಾಲ್ತೊಳೆದು ಬಿಟ್ಟದತ್ತಿಯನ್ನು ಈ ಶಾಸನ ವಿವರಿಸುತ್ತದೆ."[೨೨]

ಜಗದೇಕ ಮಲ್ಲನ ಮಹಾಸಾಮಂತರಾದ ಚಟ್ಟರಸರು ಮತ್ತು ಬರ್ಮರಸರು, ಕತ್ತಿಯುದ್ಧ ಪರಿಣಿತರೂ, ರಣಧೀರರೂ ವೈರಿ ಭೈರುಂಡರೂ ಆಗಿದ್ದರು ಎಂದು ಬೆಳಗುಂದಿಯ ಶಾಸನವೂ ಈ ಸಂಗತಿಗಳನ್ನು ಹೇಳಿದೆ. ಜಗದೇಕಮಲ್ಲನ ಹೆಂಡತಿ ಸುಗ್ಗಲಾದೇವಿಯು ವಚನಕಾರ ದೇವರದಾಸಿಮಯ್ಯನ ಶಿಷ್ಯೆಯಾಗಿದ್ದಳು ಎಂದು ಇತಿಹಾಸದ ಪುಟದಿಂದ ತಿಳಿದುಬರುತ್ತದೆ. ಜಯಸಿಂಹನಿಗೆ ಹಮ್ಮಾ ಅಥವಾ ಅವ್ವಲ ದೇವಿಯೆಂಬ ಮಗಳಿದ್ದಳೆಂಬುದು ವ್ಯಕ್ತವಾಗುತ್ತದೆ. ಈಕೆಯನ್ನು ಸೇವುಣ ದೇಶದರಸು ಮುಮ್ಮಡಿ ಬಿಲ್ಲಮನು ಮದುವೆಯಾಗಿದ್ದನೆಂದು ಪ್ರತೀತಯಿದೆ. "ವಂಕಸಂಬ್ರದಲ್ಲ ಶಾಸನ ಕ್ರಿ.ಶ. ೧೧೨೭ನೆಯ ಇಸ್ವಿಯದು. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭೂಲೋಕಮಲ್ಲನ (ಜಯಸಿಂಹ) ಕಾಲದ ಶಾಸನವಿದು ಎಂಬು ಅಭಿಪ್ರಾಯಪಡುತ್ತಾರೆ."[೨೭]

"ಕ್ರಿ.ಶ.೧೦೪೨ರಲ್ಲಿ ಜಯಸಿಂಹನ ತರುವಾಯ ಆತನ ಮಗನಾದ ಒಂದನೆಯ ಸೋಮೇಶ್ವರ ಅಧಿಕಾರಕ್ಕೆ ಬಂದನು."[೨೮] ತಂದೆ ಜಯಸಿಂಹನು ಚಕ್ರವರ್ತಿಯಾಗಿದ್ದಾಗ ಬೆಳ್ವೊಲ ೩೦೦ ಮತ್ತು ಪುಲಿಗೆರೆ ೩೦೦ಗಳನ್ನು ಮಹಾಮಂಡೇಶ್ವರನಾಗಿ ಸುಖಸಂಕಥಾವಿನೋದದಿಂದ ಆಳುತ್ತಿದ್ದನು. ಈತನನ್ನು ವೆಂಗಿಪುರವರೇಶ್ವರ ಸಮರ ಪ್ರಚಂಡ ಕುಮಾರ ಮಾರ್ತಂಡ, ಪರಿಕರಿಮದ ನಿವಾರಣ ಅಮ್ಮನಗಂಧವಾರಣ, ಪರಿವಾರ ನಿಧಾನ, ದಾನಕಾನೀನ ಹಯವತ್ಸರಾಜ, ರೂಪಮನೋಜ, ರಿಪುನೃಪತಿ ಹೃದಯಶಲ್ಯ, ಭುವನೈಕ್ಯಮಲ್ಲ, ಮಾಂಡಲಿಕ ಶಿರೋಮಣಿ ಚಾಲುಕ್ಯ ಚೂಡಾಮಣಿ, ವಿದ್ವಿಷ್ಟ ಸಂಹಾರ, ಕಟಕಪ್ರಾಕಾರ"[೨೯] ಎಂಬ ಬಿರುದುಗಳಿಂದ ಹೊಗಳಲಾಗಿದೆ. (ಆರ್.ಸಿ.ಹಿರೇಮಠ) ಕನ್ನಡ ಶಾಸನಸಂಪದ ಉಳುಗುಂದ ಶಾಸನ ಪುಟ ೩೯ ಕ್ರಿ.ಶ. ೧೦೫೩ ಕಲ್ಯಾಣ ಚಾಲುಕ್ಯ ಚಕ್ರವರ್ತಿ ೧ನೆಯ ಸೋಮೇಶ್ವರನು ಏತಗಿರಿ ಪ್ರದೇಶವನ್ನು ಆಳುತ್ತಿದ್ದನೆಂದು ಕ್ರಿ.ಶ. ೧೦೫೯ರ ಇಲ್ಲಿನ ಯರಗೋಳ ಶಾಸನ ಉಲ್ಲೇಖಿಸುತ್ತದೆ. ಈತನಿಗೆ ಸ್ವಸ್ತಿ ಸಮಸ್ತ, ಭುವನಾಶ್ರಯ ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ, ಸತ್ಯಾಶ್ರಯ ಕುಲತಿಲಕ ಚಾಲುಕ್ಯಾಭರಣ, ಶ್ರೀ ತ್ರೈಲೋಕಮಲ್ಲ ದೇವರು ಎಂಬ ಬಿರುದುಗಳಿದ್ದವು. ಶ್ರೀ ತ್ರೈಲೋಕಮಲ್ಲ ದೇವರ ವಿಜಯ ರಾಜ್ಯಮ ಚಂದ್ರಾರ್ಕ್ಕ ತಾರಬರಂ ಸಲುತ್ತಮಿರೆ ತತ್ಪಾದ ಪಾದ್ಮೋಪ ಜೀವಿ ಶ್ರೀಮತ್ ತೊಟ್ಟಕಚೆ ಮಾಚಯ

ನಾಯಕಂ ಎರಂಗೋಳದ ಉಭಯಸಾಮ್ಯಮನಾಳುತ್ತಮಿರೆ ಶಕವಂಶ ೯೮೦ನೆಯ ವಿಳಂಬಿ ಸಂವತ್ಸರದ ಉತ್ತರಾಯಣ ಸಂಕ್ರಮಣ ಮಂಮ್ಮಾ ಕೆಳಿಯೇರಿಯ ಸಿದ್ಧೇಶ್ವರ ದೇವರಿಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ತೂಬಿನ ಮೊದಲ ಕಾಲಗಳ್ದೆ ಮತ್ತರು ಎರಡು ಲೋಟ ಮತ್ತರೊನ್ದು ಮಾಪ್ಪಂಗಲ್ಲ ಪಡುವ ನೀರ್ವ್ವೆಸಯೊಳೆ ಕರಿಯನಾ ಮತ್ತ ಪನ್ನೆರಡು.

ಘಳೆಯ ಗೇಣು ಮೂವತ್ತುಮಂ (॥*) ಇಂತೀ ಧರ್ಮಕ್ಕೆ ತಪ್ಪಿದವರ್ಗ್ಗ ವಾಣರಾಸಿಯಲು ಕವಿಲೆಯನಳಿನ ಪಾತಕಮಕ್ಕುಂ ಲಿಂ (೦*) ಗಮನಳಿದಂ ಸ್ವದತ್ತಾಂ ಪರದತ್ತಾಂ ವಾಯೋಹರೇತಿ ವಸುಂಧರಾ ಷಷ್ಟಿರ್ವ್ವರಿಶ ಸಹಸ್ವಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ (॥*) ಎಂದು ಶಾಸನ ಉಲ್ಲೇಖಿಸಿದೆ. ಎರಗೋಳದ ಉಭಯ ಸಾಮ್ಯಾವನ್ನು ಮಾಚಯನಾಯಕನು ಪಾಲಿಸುತ್ತಿರುವಾಗ ಕೆರೆಯ ಏರಿಯಲ್ಲಿದ್ದ ಸಿದ್ಧೇಶ್ವರ ದೇವರಿಗೆ ಗದ್ದೆ ತೋಟಗಳನ್ನು ಬಿಟ್ಟ ದತ್ತಿಯನ್ನು ಈ ಶಾಸನ ತಿಳಿಸುತ್ತದೆ. ಈ ಶಾಸನವನ್ನು ಕೆಡಿಸಿದವರು ಹಸುವನ್ನು ಕೊಂಡ ಪಾತಕಿಗಳು ಎಂದು ಶಾಸನದಲ್ಲಿ ಪ್ರಸ್ತಾಪಿಸಲಾಗಿದೆ."[೨೭]

"ಕ್ರಿ.ಶ. ೧೦೬೦ರ ಬೆಳ್ಗುಂದೆ ಶಾಸನದಲ್ಲಿ ತ್ರೈಲೋಕಮಲ್ಲ ಒಂದನೆಯ ಸೋಮೇಶ್ವರನು ಆಳ್ವಿಕೆ ಮಾಡುತ್ತಿದ್ದ."[೨೮] ಈತನ ಮಹಾಸಾಮಂತನಾದ ರಾಯರಸನು ಆಡಳಿತ ನಡೆಸಿದನೆಂದೂ, ಅಲ್ಲಿನ ಛತ್ರಕ್ಕೆ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಬಿಟ್ಟ ಭೂದತ್ತಿಯನ್ನು ಪ್ರಸ್ತಾಪಿಸಿದೆ. ಈ ಬೆಳಗುಂದಿ ಒಂದು ಬ್ರಹ್ಮಪುರಿಯಾಗಿರುವುದನ್ನು ಆ ಕಾಲದಲ್ಲಿ ಅನೇಕ ಆಚಾರ್ಯರು, ಪಂಡಿತರು, ಯತಿಗಳು ಇದ್ದರೆಂದು ಬೆಳಗುಂದಿ ಬ್ರಹ್ಮಪುರಿ ಆಗಿತ್ತೆಂದು ಹೇಳಲಾಗಿದೆ. ಶ್ರೀ ತ್ರೈಲೋಕಮಲ್ಲ ದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕತಾರಾಂಬರಂ ಸಲುತ್ತಮಿರೆ"[೨೯] ಎಂದು ಸ್ಪಷ್ಟವಾಗಿ ಹೇಳಿದೆ.

"ಕ್ರಿ.ಶ. ೧೦೭೬ರಲ್ಲಿ ಆರನೆಯ ವಿಕ್ರಮಾದಿತ್ಯನು ಕಲ್ಯಾಣನಗರದಲ್ಲಿ ಪಟ್ಟಾಭಿಷೇಕನಾದನು"[೩೦] ಚಾಲುಕ್ಯ ಸಾಮ್ರಾಜ್ಯದ ಸಿಂಹಾಸನವನ್ನೇರಿದ ಆರನೆಯ ವಿಕ್ರಮಾದಿತ್ಯ ಈ ಮನೆತನದಲ್ಲಿಯೇ ಸುಪ್ರಸಿದ್ಧ ದೊರೆ ಎಂದು ಪ್ರಖ್ಯಾತಿ ಹೊಂದಿದ್ದಾನೆ. ಈತನು ಸುಮಾರು ಐವತ್ತು ವರ್ಷಗಳ ಕಾಲದ ವೈಭವೋಪೇತ ಆಳ್ವಿಕೆಯ ಕುರಿತು ಈತನ ಆಸ್ಥಾನ ಕವಿ ಬಿಲ್ಹಣನು ಬಣ್ಣಿಸಿದ್ದಾನೆ. ಅಷ್ಟೇ ಅಲ್ಲ ಸುದೀರ್ಘ ಕಾಲ ಕರ್ನಾಟಕವನ್ನಾಳಿದ ಈತನ ಸಾಮ್ರಾಜ್ಯದ ವೈಭವವನ್ನು ನಾಡಿನ ಸಾವಿರಾರು ಶಾಸನಗಳು ಸಾರಿ ಹೇಳುತ್ತಿವೆ. ಐತಗಿರಿ ನಾಡಿನಲ್ಲೂ ಈತನ ಕಾಲಾವಧಿಯ ಹಲವಾರು ಶಾಸನಗಳು ದೊರಕಿವೆ. ಐತಗಿರಿ ಪ್ರದೇಶದ (ತಾಲ್ಲೂಕಿನ) ಅನಪೂರ, ಇಡ್ಲೂರು, ಹೆಡಗಿಮದ್ರಿ ಶಾಸನಗಳಲ್ಲಿ ಆರನೆಯ ವಿಕ್ರಮಾದಿತ್ಯನ ಬಿರುದುಗಳನ್ನು ಬಣ್ಣಿಸಲಾಗಿದೆ. ಸ್ವಸ್ತಿ ಸಮಸ್ತ ಭುವನಾಶ್ರಯ, ಶ್ರೀ ಕುಲತಿಲಕ ಚಾಲುಕ್ಯಾಭರಣ ಎಂದು ತನ್ನ ವಂಶದ ಪೂರ್ವಜರಿಗಿದ್ದ

ಬಿರುದುಗಳನ್ನು ಈತನಿಗೂ ಬಣ್ಣಿಸಿ ಕೀರ್ತಿಸಲಾಗಿದೆ. ಕ್ರಿ.ಶ. ೧೧೦೭ರ ಕಾಲದ ಅನಪೂರ ಶಾಸನದಲ್ಲಿ ಶ್ರೀತ್ರಿಭುವನಮಲ್ಲ ದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕ ತಾರಾಂಬರಂ ಕಲ್ಯಾಣ ಪುರದ ನೆಲೆವೀಡಿನೊಳು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಎಂದು ಸ್ಪಷ್ಟವಾಗಿ ಹೇಳಿದೆ."[೨೨]

ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನು ಕಲ್ಯಾಣಪುರದಿಂದ ಆಳುತ್ತಿದ್ದಾಗ ಆತನ ಪಿರಿಯರಸಿ ಚಂದಲದೇವಿಯರ ಮಗ ಜಗದೇಕಮಲ್ಲ ಕುಮಾರ ಸತ್ಯಾಶ್ರಯದೇವರು ಮಹಾಮಂಡಲೇಶ್ವರನಾಗಿ ರಾಜ್ಯವಾಳುತ್ತಿದ್ದನಂತೆ. "ಜಗದೇಕಮಲ್ಲಂ ವರ್ಷದ ೩೭ನೆಯ ಸರ್ವ್ವಜಿತ್ಸಂವತ್ಸರದ ಮಾರ್ಗಶಿರದಮಾವಾಸ್ಯೆ ಸೋಮವಾರದಂದಿನ ಸೂರ್ಯ್ಯಗ್ರಹಣ ನಿಮಿತ್ಯದಿಂಕಲ್ಲ ಕೆಳಗುನಾಡ ಮೊದಲ ಬಾಡಂ ರಾಜಧಾನಿ ಉಜ್ಜಗವೊಳಲ ಆನೆಮೇಶ್ವರ ದೇವ ತ್ರಿಭೋಗಾಭ್ಯಂತರ ಸಿದ್ಧಿಯಂ ಸರ್ವ್ವ ನಮಸ್ಯವಾಗಿ ಅಲ್ಲಿಯ ಆಚಾರ್ಯ್ಯರ ದಿವ್ಯಶಕ್ತಿ ಪಣ್ಡಿತ ದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ೧ ಎಂದು ಅನಪೂರದಲ್ಲಿ ಹೇಳಿದು. ಕಲ್ಲಕೆಳಗು ನಾಡಿನ ರಾಜಧಾನಿಯಾದ ಉಜ್ಜಗವೊಳಲಿನ ಆನೇಶ್ವರ ದೇವರ ಪೂಜೆ ಪುನಸ್ಕಾರಗಳಿಗೆ ಅಲ್ಲಿಯ ಆಚಾರ್ಯ, ದಿವ್ಯ ಶಕ್ತಿ ಪಂಡಿತರ ಕಾಲ್ತೊಳೆದು ಬಿಟ್ಟ ಭೂ ದತ್ತಿ, ಕೆರೆ ದೇವರ ಕೇರಿಗಳನ್ನು ಶಾಸನ ಸ್ಪಷ್ಟಪಡಿಸುತ್ತದೆ."[೨೩]

"ಇದೇ ಶಾಸನದ ೩೪ನೆಯ ಸಾಲಿನಿಂದ ಇನ್ನೊಂದು ದತ್ತಿಯ ವಿವರಗಳಿದ್ದುದು ಕಂಡುಬರುತ್ತದೆ. ಸ್ವಸ್ತಿಶ್ರೀ ಮುಚ್ಚಾಳುಕ್ಯ ವಿಕ್ರಮ ವರ್ಷದ ೩೭ನೆಯ ನಂದನ ಸಂವತ್ಸರದ ಚೈತ್ರಮಾವಾಸ್ಯೆ ಸೋಮವರಾದಂದಿನ ಸೂರ್ಯಗ್ರಹಣ ನಿಮಿತ್ಯದಿಂ ಶ್ರೀ ಮನ್ಮಪ್ರಧಾನಂ ದಣ್ಣನಾಯಕಂ ಪೋತರಸರು ಕಲ್ಲ ಕೆಳಗು ನಾಡ ಮೊದಲಬಾಡಂ ರಾಜಧಾನಿ ಉಜ್ಜವೊಳಲಾನೆಮೇ ವಾಚಸ್ಪತಿ ಪಣ್ಡಿತ ದೇವರ್ಗ್ಗೆ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಬಿಟ್ಟ ಮತ್ತಕ ನೂರು"[೨೪] ಈ ಮಹಾಪ್ರಧಾನ ದಂಡನಾಯಕ ಪೋತರಸರು ಕಲ್ಲ ಕೈಳಗು ಐನೂರು ಮೊದಲಬಾಡ ರಾಜಧಾನಿಯಾದ ಉಜ್ಜಿಗವೊಳಲ ಶ್ರೀ ಮೂಲಸ್ಥಾನದ ಸ್ವಯಂಭು ಮಹಾಕಾಳದೇವರ ಅಂಗಭೋಗ ಪೂಜೆ ಪುನಸ್ಕಾರಗಳಿಗೆ ಬಿಟ್ಟ ಸುಂಕದತ್ತಿಗಳ ಬಗ್ಗೆ ವಿವರಿಸುತ್ತದೆ.

ಕ್ರಿ.ಶ. ೧೧೩೮ರ ಇಡ್ಲೂರಿನ ಶಾಸನ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಸೂಚಿಸಿ, ಆತನ ಪಿರಿಯರಸಿ ಚಂದಲದೇವಿಯ ಮಹಾಮಂಡಲೇಶ್ವರನೂ ಆದ ಜಗದೇಕಮಲ್ಲ ಇರಿವಬೆಡಂಗ ಸತ್ಯಾಶ್ರಯನನ್ನು ಹೆಸರಿಸುತ್ತದೆ.

ಈತನ ಮಹಾಸಾಮಂತನಾದ ಭೂತರಸನು ಸತ್ಯಾಶ್ರಯ ದೇವನ ಹೇಳಿಕೆಯಂತೆ ಕಲ್ಲಕೆಳಗು ನಾಡಿನ ಇಡುಗುಲೂರಿನ ಜಡೆಯ ಶಂಕರದೇವರಿಗೆ ಬಿಟ್ಟ ಭೂ ದತ್ತಿಯ ಬಗ್ಗೆ ಪ್ರಸ್ತಾಪಿಸುತ್ತದೆ.

"ತ್ರಿಭುವನಮಲ್ಲನ ಬಿರುದುಗಳನ್ನು ಹೆಸರಿಸಿ ಉತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಾಮಾ ಚಂದ್ರಾರ್ಕತಾರಂಬರಂ"[೨೪] ಎಂದು ಸ್ಪಷ್ಟಪಡಿಸುತ್ತದೆ. ಸ್ವಸ್ತಿ ಸಮಸ್ತ ಭುವನೇಶ್ವರ ಸಮರಮಹೇಶ್ವರ, ಯಾಚಕನ ಚಿಂತಾಮಣಿ, ಕುಮಾರ ಚೂಡಾಮಣಿ, ವಂದಿಬ್ರಿಂದ ಚಕೋರಚನ್ದ್ರ, ರಾಜಲಕ್ಷ್ಮೀನಿವಾಸೋಪೇಂದ್ರ, ಸತ್ಯರಾಧೇಯ ಸೌ(ಶೌ) ಚಗಾಂಗೇಯ ನಮಳ ಚರತ್ರಂ, ಪರಾಗನಾಪುತ್ರನಿಳಿವಬೇಡಂಗ ಬಪ್ಪುವನಸಿಂಗಂ ವಿಸ್ತಾರಿತ ವಿಷದ ಚಾಲುಕ್ಯ ಕುಳೋತ್ತುಂಗಂ ಶ್ರೀ ಮತ್ಪಿರಿಯರಸಿ ಚಂದಲಾದೇವಿಯರಣುಗಂ ನಾಮಾದಿ ಸಮಸ್ತ ರಾಜಾವಳೀವಿರಾಜಮಾನಂ ಶ್ರೀ ಮನ್ಮಹಾ ಮಂಡಳೇಶ್ವರಂ ಜಗದೇಕಮಲ್ಲಂ ಕುಮಾರಂ ಸತ್ಯಾಶ್ರಯ ದೇವರ ಎಂದು ಶಾಸನದಲ್ಲಿ ಉಲ್ಲೇಖವಿದೆ"[೨೫] ಸಮಸ್ತ ಪ್ರಶಸ್ತಿಗಳಿದ್ದವೆಂದು ತಿಳಿದುಬರುತ್ತದೆ.

ಇಡ್ಲೂರಿನ ಶಾಸನದಲ್ಲಿ ಒಂದು ಮಹತ್ವದ ಗಮನಾರ್ಹವಾದ ಅಂಶ ಎದ್ದು ಕಾಣುತ್ತದೆ. ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲದೇವಿಗೆ ನಾಲ್ಕು ಜನ ಮಕ್ಕಳಿದ್ದು, ಅವರಲ್ಲಿ ಮೂರು ಜನ ಗಂಡುಮಕ್ಕಳು, ಒಬ್ಬಳು ಹೆಣ್ಣು ಮಗಳೂ ಇದ್ದಳೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕ್ರಿ.ಶ. ೧೧೧೫ರ ಇಡ್ಲೂರಿನ ಶಾಸನದಲ್ಲಿ ಆರನೆಯ ವಿಕ್ರಮಾದಿತ್ಯನಿಗೆ ನಾಲ್ಕು ಜನ ಮಕ್ಕಳಲ್ಲ ಐದು ಜನರಿದ್ದು, ಅದರಲ್ಲಿ ನಾಲ್ಕು ಜನ ಗಂಡು ಮಕ್ಕಳು, ಒಬ್ಬಳು ಹೆಣ್ಣುಮಗಳು ಎಂದು ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಚಂದಲಾದೇವಿಗೆ ಜಗದೇಕಮಲ್ಲ ಬಿರುದಿನ ಇರಿವಬೆಡಂಗ ಸತ್ಯಾಶ್ರಯನೆಂಬ ಮಗನಿದ್ದನೆಂದರೂ, ಆತನೂ ಮಹಾಮಂಡಳೇಶ್ವರನಾಗಿದ್ದನೆಂದು ತಿಳಿದುಬರುತ್ತದೆ. ಈತನು ತಂದೆಯಂತೆ ಶೂರನೂ, ಧೀರನೂ ಆಗಿದ್ದನೆಂದು ಶಾಸನದಲ್ಲಿ ಹೊಗಳಲಾಗಿದೆ. ಭೂತರಸನು ಜಗದೇಕಮಲ್ಲ ಕುಮಾರ ಸತ್ಯಾಶ್ರಯ ದೇವರ ಪಾದಪದ್ಮೋಪ ಜೀವಿಯಾಗಿದ್ದು, ಮಹಾಸಾಮಾಂತ್ನಾಗಿ ಸೇವೆ ಸಲ್ಲಿಸುತ್ತಿದ್ದನು.

"ಕ್ರಿ.ಶ. ೧೧೭೩ ಇಡ್ಲೂರಿನ ಇನ್ನೊಂದು ಶಾಸನ ಗಮನಿಸಿದಾಗ ಅಲ್ಲಿ ವಿಕ್ರಮಾಧಿತ್ಯನು ಎರಡನೆ ಬಾರಿಗೆ ಪಟ್ಟಬಂಧೋತ್ಸವದ ಬಗ್ಗೆ ಚಾಲುಕ್ಯ ಮಲ್ಲದೇವರು ಬೆಣ್ಣೆಕಲ್ಲು ನೆಲೆವೀಡಿನೊಳು ಪಟ್ಟವಂ ಕಟ್ಟಿಸಿಕೊಂಡು ಸುಕ(ಖ) ಸಂಕಥಾ ವಿನೋದದಿಂ ರಾಜಗೆಯ್ಯುತ್ತಮಿರೆ ಎಂದು ಉಲ್ಲೇಖವಿದೆ. ಇದನ್ನು ನೋಡಿದಾಗ ೧೦೭೬ರಲ್ಲಿ ಪಟ್ಟವೇರಿ ವಿಕ್ರಮ ವರ್ಷ ಘೋಷಿಸಿಕೊಳ್ಳುವ ಮೊದಲು ಆತ ಅಣ್ಣನಾದ ೨ನೆಯ ಸೋಮೇಶ್ವರನ ವಿರುದ್ಧ ದಂಗೆಯಿದ್ದು ತನ್ನ ಸ್ವಾಶಕ್ತಿಯ ಮೇಲೆ ನಂಬಿಕೆಯಿಟ್ಟು, ತನ್ನ ಒಡೆಯತನದ ಸಿಂದವಾಡಿಯ ೧೦೦೦ಕ್ಕೆ ಕಲ್ಯಾಣ ನಗರದಿಂದ ನೇರವಾಗಿ ಬರುತ್ತಾನೆ. ಅದರಲ್ಲಿಯೇ ಇದ್ದ ಬೆಳ್ನಿಕಲ್ಲಿನಲ್ಲಿ ಸ್ವತಂತ್ರ ಅರಸನೆಂದು ಘೋಷಿಸಿಕೊಂಡಿರಬೇಕು ಎಂದು ಹನುಮಾಕ್ಷಿ ಗೋಗಿಯವರ ಅಭಿಪ್ರಾಯಪಡುತ್ತಾರೆ."[೨೬]

ಇದನ್ನು ಗಮನಿಸಿದಾಗ ಅಣ್ಣನ ಜೊತೆ ವೈಮನಸ್ಸು ಹೊಂದಿ ವಿಕ್ರಮಾದಿತ್ಯನು ಮೊದಲ ಬಾರಿಗೆ ಬೆಣ್ಣೆಕಲ್ಲಿನ ೧೦೭೬ರಲ್ಲಿ ಪಟ್ಟಕಟ್ಟಿಸಿಕೊಂಡಿರಬೇಕೆಂದು ಶಾಸನದಿಂದ ತಿಳಿದುಬರುತ್ತದೆ ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ. ಅಂದೇ ಇಡುಗುಲೂರು (ಇಡ್ಲೂರು) ಜಡೆಯ ಶಂಕರಲಿಂಗ ದೇವರಿಗೆ ಸೌಧರೇ ತಿಮ್ಮರಸರು, ಸೇರಿ ಬಿಟ್ಟಹಣದ ದತ್ತಿಯನ್ನು ಈ ಶಾಸನದಲ್ಲಿ ವಿವರಿಸಲಾಗಿದೆ. ಆರನೆಯ ವಿಕ್ರಮಾದಿತ್ಯನ ಪಟ್ಟಬಂಧೋತ್ಸವದ ಬಗ್ಗೆ ಇಡ್ಲೂರಿನ ಶಾಸನ ನೀಡುವ ಹೊಸ ಮಾಹಿತಿ ವಿಶೇಷವಾಗಿ ಗಮನಿಸುವಂತಹದ್ದು.

"ಕ್ರಿ.ಶ. ೧೦೩೩ರ ಹೆಡಗಿಮದ್ರಿ ಶಾಸನವು ಸಮಧಿಗತ ಪಂಚಮಹಾಸ(ಶ)ಬ್ದ ಮಹಾಣ್ಡಳೇಶ್ವರಂ ಮಾಹಿಷ್ಮತಿಪುರ ಮಾಹಿಷ್ಮ ತಿಪುರವರೇಶ್ವರಂ ರಿಪುಮಣ್ಡಳಿಕ ಬೇರುಣ್ಡಂ ಕಟಕರಕ್ಷಾಪಾಳಕಂ ಮೂವಡಿಗಣ್ಣಂ ಅಯ್ಯಣ ವಂಶೋದ್ಭವ ಕುಳತಿಳಕಂ, ಶ್ರೀಮತ್ ರೇವರಸರ್ ಜಯಸಿಂಘದೇವರ ರಾಜ್ಯದೊಳೆ"[೩೭] ಎಂದು ಉಲ್ಲೇಖವಿದೆ.

ಹೈಹಯವಂಶದ ಮಹಾಮಂಡಲೇಶ್ವರ ದೇವರಸರು ಆಳುತ್ತಿರುವಾಗ ಕೊಲ್ಲೂರು ಸಿದ್ಧೇಶ್ವರಮಠದ ಪ್ರಮದಪ್ಪಿರ ಕಾಲ್ತೊಳೆದು. ಬಿಟ್ಟ ಭೂದತ್ತಿಯ ಬಗ್ಗೆ ಈ ಶಾಸನ ಪ್ರಸ್ತಾಪಿಸಿದೆ. ಇದೇ ಶಾಸನದ ಎರಡನೆಯ ಭಾಗದಲ್ಲಿ ಮಲ್ಲಿಕಾರ್ಜುನ ದೇವರಿಗೆ ಭಿನ್ನಹಿಸಿಕೊಂಡು, ನಾಲ್ಕು ಲಿಂಗಗಳನ್ನು ಪ್ರತಿಷ್ಠಾಪಿಸಿ ಮಲ್ಲಿಕಾರ್ಜುನ ದೇವರಿಗೆ ನೈವೇಧ್ಯಕ್ಕಾಗಿ ಮತ್ತು ಕಲ್ಲುಕುಟಿಗರಿಗೆ ಮುಜೆಯ ನಾಯಕ ಬಹು ಮೌಲ್ಯದಾನ ಅದು. ಅವರ ಪರಮೋಚ್ಛ ಸಂಸ್ಕೃತಿಯೂ ಹೌದು. ದ್ಯೋತಕವೂ ಹೌದು ಹೀಗಾಗಿ ಈ ಪ್ರದೇಶದಲ್ಲಿ ದಾನ ಶಾಸನಗಳೇ ಹೆಚ್ಚು ಕಂಡುಬರುತ್ತವೆ.

"ಕ್ರಿ.ಶ. ೧೦೭೭ರಲ್ಲಿ ಆರನೆಯ ವಿಕ್ರಮಾದಿತ್ಯ ತನ್ನ ಸಹೋದರ ನಾಲ್ಕನೆಯ ಜಯಸಿಂಹನ ಬಂಡಾಯವನ್ನಡಗಿಸಿ ಏತಗಿರಿಯ ತಲಾಪುರುಷ ಮತ್ತು ಹಿರಣ್ಯಗರ್ಭಯಾಗಗಳನ್ನು ಆಚರಿಸಿದನೆಂದು ಮತ್ತು ಏತಗಿರಿಯನ್ನು ತನ್ನ ಉಪರಾಜಾಧಾನಿಯನ್ನಾಗಿ ಮಾಡಿಕೊಂಡನೆಂದೂ ಶಾಸನಗಳಿಂದ ತಿಳಿದುಬರುತ್ತದೆ."[೩೮]

"ಶ್ರೀಮತ್ಪರಮ ಗಂಭೀರ ಸ್ಯಾದ್ವಾಮೋಘ ಲಾಂಛನನಂ ಜೀಯಾ ತ್ರೈಲೋಕ್ಯಾನಾಥಸ್ಯ ಶಾಸನಂ ಜಿನಶಾಸನ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವಿವಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯ ಕುಲತಿಳಕಂ ಚಾಲುಕ್ಯಾಭರಣಂ ಶ್ರೀ ಮತ್ರಿಭುವನ ಮಲ್ಲದೇವಂ ವಿಜಯ ರಾಜ್ಯ ಮುತ್ತರೋತ್ತರಾಧಿ ಪ್ರಿಥ್ವಿಪ್ರವರ್ಧಮಾ ತಾರಾಂಬರಂ ಸಲುತ್ತಮಿರೆ ಎಂದು ಮಾಧ್ವಾರ ಶಾಸನ ತಿಳಿಯುತ್ತದೆ. ಈ ಶಾಸನವು ಜೈನ ಶಾಸನಕ್ಕೆ ಸಂಬಂಧವಿದೆ. ಶ್ರೀಮತ್ಪರಮ ಗಂಭೀರ ಎನ್ನುವ ಜಿನಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. ಇದರ ಕಾಲ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆರನೆ ವಿಕ್ರಮಾದಿತ್ಯನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ."[೩೯]

ಮಹಾಮಂಡೇಶ್ವರನೊಬ್ಬ ಕಾಳಿಕಾದೇವಿಗಾಗಿ ಬಿಟ್ಟ ಭೂ ದತ್ತಿಯನ್ನು ಮತ್ತು ವರ್ತಕರಾದ ಬಮ್ಮಿಶೆಟ್ಟಿಯು ಅದೇ ದೇವರಿಗೆ ನೀಡಿದ ಸುಂಕದತ್ತಿಯನ್ನು ಹೆಸರಿಸುತ್ತದೆ. ಶಾಸನ ತೃಟಿತ ಮತ್ತು ಸವೆದು ಹೋಗಿರುವುದರಿಂದ ವಿವರಗಳು ಸಾಕಷ್ಟು ಲಭ್ಯವಿಲ್ಲ. ಸ್ವಸ್ತಿ ಸಮಸ್ತ ಪ್ರಶಸ್ತಿ ಎಂಬ ಕನ್ನಡದ ಫಲಶೃತಿ ಹೇಳುವಂತೆ ತೋರುತ್ತದೆ. ಶಾಸನದಲ್ಲಿ ಉಜ್ಜಿಗವೊಳಲ್ ಎನ್ನುವ ಊರಿನ ಉಲ್ಲೇಖವಿದೆ. ಇದು ಕಲ್ಲಕೆಳಗು ಐನೂರು ಪ್ರಾಂತದ ರಾಜಧಾನಿಯಾದ ಉಜ್ಜುಗ ಒಳಗೊಂಡಿದೆ. ಸಧ್ಯ ಆಂಧ್ರಪ್ರದೇಶ ಮಹಿಬೂಬ ನಗರ ಜಿಲ್ಲೆಯ ಉಜ್ಜಲ್ಲಿಯಾಗಿದೆ.

ಯಾದಗಿರಿಯನ್ನು ಕಲ್ಯಾಣ ಚಾಲುಕ್ಯರು ತಮ್ಮ ಕಾಲಾವಧಿಯಲ್ಲಿ ಸುವ್ಯವಸ್ಥಿತವಾಗಿ ಆಡಳಿತ ನಡೆಸಿದನೆಂದು ಶಾಸನಗಳಿಂದ ತಿಳಿದುಬರುತ್ತದೆ. ಚಾಲುಕ್ಯರು ಕರ್ನಾಟಕದ ವಾಸ್ತುಶಿಲ್ಪ, ಕಲೆ, ಸಾಹಿತ್ಯ, ಸಂಗೀತ, ನೃತ್ಯ, ಮೊದಲಾದ ಸಾಂಸ್ಕೃತಿಕ ಕ್ಷೇತ್ರಕ್ಕೆ ಸರ್ವಾಂಗೀಣ ಅಭಿವೃದ್ಧಿ ಶ್ರಮಿಸಿದರು. ಅದನ್ನು ನಾವು ಯಾದಗಿರಿಯ ಭಾಗದಲ್ಲಿ ಶಾಸನಗಳ ಆಧಾರದಿಂದ ಕಾಣುತ್ತೇವೆ. ಯಾದಗಿರಿ ಸಹ ಕಲ್ಯಾಣ ಚಾಲುಕ್ಯರ ಆಡಳಿತ ಪ್ರದೇಶವಾಗಿತ್ತೆಂದು ಇಡ್ಲೂರು, ಅನಪೂರ, ಬೆಳಗುಂದಿ, ಯಾದಗಿರಿ, ಮಾಧ್ವಾರ ಶಾಸನಗಳು ಸ್ಪಷ್ಟಪಡಿಸುತ್ತವೆ.

**ಕಲ್ಯಾಣಿ ಕಳಚೂರ್ಯರರು (ಕ್ರಿ.ಶ. ೧೧೫೭–೧೧೮೪)**

ಕರ್ನಾಟಕದ ಅರಸು ಮನೆತನಗಳಲ್ಲಿ ಕಲ್ಯಾಣದ ಕಲಚೂರ್ಯರ ಮನೆತನವೂ ಒಂದು. ಕಲಚೂರಿ ಅರಸರು ಮೊದಲು ಕಲ್ಯಾಣ ಚಾಲುಕ್ಯರ ಮಾಂಡಲಿಕರೂ, ಬೀಗರೂ ಆಗಿದ್ದರು. "ಕಲಚೂರಿ ಅರಸ ಬಿಜ್ಜಳನು ಚಾಲುಕ್ಯ ಚಕ್ರವರ್ತಿಯ ಮೂರನೆಯ ತೈಲಪನನ್ನು ಕೊಂದು ಸಾರ್ವಭೌಮನೆಂದು ಸಾರಿ ಆತನ ಪ್ರದೇಶವನ್ನು ಆಳಲಾರಂಭಿಸಿದನು."[೨೦] ಕಲಚೂರಿ ಮನೆತನದಲ್ಲಿ ಸ್ವತಂತ್ರವಾದ ಭದ್ರಬುನಾದಿ ಹಾಕಿ ಕ್ರಿ.ಶ. ೧೧೫೭ರಲ್ಲಿ ತನ್ನ ಆಡಳಿತ ನಡೆಸಿದನು. ಈತನ ಕಾಲದ ಯಾವ ಶಾಸನಗಳು ಯಾದಗಿರಿ ತಾಲ್ಲೂಕಿನಲ್ಲಿ ಲಭ್ಯವಾಗಿಲ್ಲ.

"ಈ ವಂಶದವರನ್ನು ಕಲಚೂರಿ ಎಂದು ಕರೆದರೂ ಕೂಡ ಕೇಟಚೂರಿ, ಕಲಟ್‌ಚೂರಿ, ಕಲಿಚೂರಿ ಎಂಬ ಪದಗಳೂ ಶಾಸನಗಳಲ್ಲಿ ಕಂಡುಬರುತ್ತದೆ. ಮೂಲತಃ ಇವರು ಮಧ್ಯಭಾರತದಿಂದ ಬಂದವರೆಂದೂ ಯದು ಮತ್ತು ಸಹಸ್ರಚಿತ್ (ಕಾರ್ತಿವೀರ್ಯ) ಅವರ ವಂಶದವರೆಂದೂ ಕರೆದುಕೊಳ್ಳುತ್ತಾರೆ. ಕಲ್ಯಾಣ ಚಾಲುಕ್ಯರ ಮನೆತನದಲ್ಲಿ ಶಿಥಿಲತೆ ಕಂಡುಬಂದಾಗ ಕಲಚೂರ್ಯರು ತಮ್ಮ ಸಾರ್ವಭೌಮತ್ವ ಪ್ರದರ್ಶಿಸಿ ಸುವರ್ಣ ವೃಷಭ ನಂದಿಯನ್ನು ತಮ್ಮ ಲಾಂಛನವನ್ನಾಗಿ ಸ್ವೀಕರಿಸಿ, ಕ್ರಿ.ಶ. ೧೧೯೨ರಲ್ಲಿ ರಾಜ ಗ್ರಹಣ ಮಾಡಿದರು."[೨೧] ಇವರು ಮುಂದೆ ಕಲ್ಯಾಣ ಚಾಲುಕ್ಯರ ಪ್ರದೇಶದಲ್ಲೆಲ್ಲಾ ರಾಜ್ಯಭಾರ ಕೈಗೊಂಡರು.

ಕಲಚೂರಿ ಅರಸರು ತಮ್ಮ ಆಡಳಿತಾವಧಿಯಲ್ಲಿ ಯಾದಗಿರಿಯನ್ನು ತಮ್ಮ ಅಧೀನಕ್ಕೊಳಪಡಿಸಿ ಕೊಂಡಿರಬೇಕು. ಈ ವಂಶದ ಮಾಂಡಲಿಕರಾದ ಉಚ್ಚಿತ, ಬಿಜ್ಜಳ, ಕರ್ಣ, ಜೋಗಮ ಇವರೆಲ್ಲ ಅನುಕ್ರಮವಾಗಿ ಆಳುವಾಗ "ತರಿಕಾಡುನಾಡು ಪ್ರದೇಶವನ್ನು ಮಂಗಳವೇಡೆಯಿಂದ ಆಳುತ್ತಿದ್ದ ಜೋಗಮನ ಮಗ ಪೇರ್ಮಾಡಿಯ ಆರನೆಯ ವಿಕ್ರಮಾದಿತ್ಯನ ಮಗಳು ಸಾವಳಾದೇವಿಯನ್ನು ವರಿಸಿದನು"[೪೨] ಎಂದು ತಿಳಿದುಬರುತ್ತದೆ. ಈಕೆಯ ಮಗನೇ ಬಿಜ್ಜಳ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಇಮ್ಮಡಿ ಬಿಜ್ಜಳನು ಒಬ್ಬ ಸಮರ್ಥ ಅರಸನಾಗಿದ್ದು ತನ್ನ ಮಾಂಡಲಿಕರನ್ನೆಲ್ಲಾ ಹತೋಟಿಯಲ್ಲಿಟ್ಟಿದನ್ನು. ಈತನಿಗೆ "ಮಹಾಮಂಡಳೇಶ್ವರ ಕಾಲಂಜನಪುರವರಾಧೀಶ್ವರ ಸುವರ್ಣ ವೃಷಭಧ್ವಜ, ಡಮರುಗ ತೂರ್ಯನಿರ್ಘೋಷಣ ಕಳಚೂರ್ಯ, ಕುಳಮಳಮಾರ್ತಂಡ, ಕದನ ಪ್ರಚಂಡ, ಮೌನ ಕನಕಾಚಲ, ಸುಭಟರಾದಿತ್ಯ, ಕಲಿಗಳಂ ಕುಶಗಜ ಸಾಮಂತಂ ಶರಣಾಗತ ವಜ್ರ ಪಂಜರ ಪ್ರತಾಪಲಂಕೇಶ್ವರ, ಪರನಾರಿ ಸಹೋದರ, ಶನಿವಾರ ಸಿದ್ಧಿ ಗಿರಿದುರ್ಗಮಲ್ಲ, ಚಲದಂಕರಾಮ, ವೈರೀಭ ಕಂಠೀರವ, ನಿಶ್ಯಂಕಮಲ್ಲ" ಎಂದು ಎಳವತ್ತಿ ಶಾಸನದಲ್ಲಿ ಈತನ ಬಿರುದುಗಳ ಬಗ್ಗೆ ಉಲ್ಲೇಖಿಸಿದೆ."[೪೩] ಬಿಜ್ಜಳನಿಗೆ ಬಿಜ್ಜ, ವಿಜ್ಜಳ ಮತ್ತು ಬಿಜ್ಜಣ ಎಂಬ ಹೆಸರುಗಳಿದ್ದವು.

"ಕಲಚೂರ್ಯರು ಸುಮಾರು ಇಪ್ಪತ್ತು ವರ್ಷಗಳ ಕಾಲ ಸ್ವತಂತ್ರವಾಗಿ ಕರ್ನಾಟಕವನ್ನಾಳಿದರು. ಇವರ ಕಾಲದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ ಒಂದು ಜಟಿಲವಾದ ಯುಗವಾಯಿತು. ಕರ್ನಾಟಕದ ಜನತೆಗೆ ಕಂಡರಿಯದ, ಕೇಳರಿಯದ ಅನುಭವ ಕಣ್ಣು ಮುಂದಯೇ ಕಂಡು ನಿಂತಿತು. ಈ ಯುಗದಲ್ಲಿ ಉದ್ಭವಿಸಿದ ರಾಜ್ಯಕ್ರಾಂತಿ, ಧರ್ಮಕ್ರಾಂತಿ, ಸಾಹಿತ್ಯಕ್ರಾಂತಿ, ಇವುಗಳ ಯಥಾರ್ಥ ಸ್ವರೂಪವನ್ನು ಕಂಡುಹಿಡಿಯುವ ಅನ್ವೇಷಕರು ಮಾಡಿದ ಪ್ರಯತ್ನಗಳು ಇನ್ನೂ ಅಪೂರ್ವಾವಸ್ಥೆಯಲ್ಲಿವೆ"[೪೪] ಎಂದು ಡಾ. ಪಿ.ಬಿ.ದೇಸಾಯಿ ಅಭಿಪ್ರಾಯಪಡುತ್ತಾರೆ. ವೀರಶೈವ ಧರ್ಮಪ್ರವರ್ತಕರು, ಭಕ್ತಿಭಂಡಾರಿ ಬಸವಣ್ಣನವರು ಬಿಜ್ಜಳನು ಅರ್ಥಮಂತ್ರಿಯಾಗಿದ್ದನು. ಇವರ ನೇತೃತ್ವದಲ್ಲಿ ನಡೆದ ವೀರಶೈವ ಜಾಗೃತಿ ಕಲ್ಯಾಣ ದೂರದ ಶಿವಶರಣರನ್ನು ಆಕರ್ಷಿಸಿತು. ಇದು ಅನುಭವ ಮಂಟಪ ಸ್ಥಾಪನೆಗೆ ನಾಂದಿಯಾಯಿತು. ಬಸವಣ್ಣನವರು ಯಾವ ಜಾತಿ, ಮತ, ಮೇಲು-ಕೀಳೆನ್ನದೆ ಸರ್ವರೂ ಒಂದೇ ಸಮಾನ ಎಂದು ಘೋಷಿಸಿದರು. ಕಾಯಕದ ಮಹತ್ವವನ್ನು ಅರುಹಿ ಸತ್ಯ ಶುದ್ಧ ಕಾಯಕವನ್ನು ಪ್ರತಿಪಾದಿಸಿದರು.

"ಬಸವಣ್ಣನವರು ಬಿಜ್ಜಳನ ರಾಜ್ಯಸತ್ತೆಯೊಳಗಿನ ಜಿಡ್ಡುಗಟ್ಟಿದ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯನ್ನು ತಿರಸ್ಕರಿಸಿದರು. ಕೆಳಜಾತಿಯ ಮಹಾಜ್ಞಾನಿ ಅಲ್ಲಮ ಪ್ರಭುಗಳು ಶೂನ್ಯ

ಸಿಂಹಾಸನವನ್ನೇರಿದಾಗಲೇ ಕಲ್ಯಾಣದ ಪಟ್ಟಭದ್ರರಿಗೆ, ಎಲ್ಲಾ ದೃಷ್ಟಿಯಿಂದಲೂ ಸಮೃದ್ಧವಾಗಿದ್ದ ತಮ್ಮ ನೆಲ ಕುಸಿಯುತ್ತಿರುವ ಅರಿವಾಯಿತು."[೪೫] ಅಂದು ವರ್ಣವ್ಯವಸ್ಥೆ ಸಂದರ್ಭದಲ್ಲಿ ಅಸ್ಪೃಶ್ಯ ಜಾತಿಯ ಸಮಗಾರ ಹರಳಯ್ಯನ ಮಗನೊಂದಿಗೆ ಬ್ರಾಹ್ಮಣ ಮಧುವರಸನ ಮಗಳೊಂದಿಗೆ ವಿವಾಹವನ್ನು ಬಸವಣ್ಣನವರು ಏರ್ಪಡಿಸಿದಾಗ ವರ್ಣಾಶ್ರಮ ಧರ್ಮಕ್ಕೆ ಚ್ಯುತಿ ಬಂದಿತೆಂದು ಸನಾತನಿಗಳು ಮತ್ತು ಸಂಪ್ರದಾಯಸ್ಥರು ಬಿಜ್ಜಳನಿಗೆ ದೂರಿದರು. ಅದನ್ನೇ ನೆಪ ಮಾಡಿಕೊಂಡು ಯಥಾಸ್ಥಿತಿ ವಾದಿಗಳು ಶರಣರ ಹತ್ಯೆ ಮಾಡಿದರು. ಇದನ್ನು 'ಶರಣರ ಹತ್ಯಾಕಾಂಡ' ಎಂದು ರಂಜಾನ್ ದರ್ಗಾ ಅವರು ಅಭಿಪ್ರಾಯಪಡುತ್ತಾರೆ."[೪೬] ಈ ಕಲ್ಯಾಣದ ಕ್ಷೋಭೆಯಿಂದ ನೊಂದ ಅನೇಕ ಶರಣರು ಬೇರೆ ಬೇರೆ ಕಡೆ ಚದುರಿದರು.

ಬಿಜ್ಜಳನು ಚಕ್ರವರ್ತಿಯಾದ ಮೇಲೆ ಜನರಲ್ಲಿ ಆಂತರಿಕ ಪ್ರತಿಭಟನೆ ನಡೆಯಿತು. ಕಲ್ಯಾಣ ಚಾಲುಕ್ಯರ ಮಾಂಡಲಿಕರಾದ ಹೊಯ್ಸಳರು ಬಿಜ್ಜಳನ ಮೇಲೆ ಯುದ್ಧ ಸಾರಿದರು. ಪಾಂಡ್ಯರು ಈತನನ್ನು ವಿರೋಧಿಸಿದರು. ಬಿಜ್ಜಳನು ತನ್ನ ಶಕ್ತಿ ಶೌರ್ಯ, ಸಾಹಸ, ರಾಜನೀತಿ ಕೌಶಲ್ಯತೆಯಿಂದ ರಾಜಕೀಯ ವಲಯದಲ್ಲಿ ಅಲೆಯೆಬ್ಬಿಸಿದನು. ಆತನ ರಾಜ್ಯದಲ್ಲಿ ಆಂತರಿಕ ಗಲಭೆಯಿಂದಾಗಿ ಸಾಮಾಜಿಕ ನೆಮ್ಮದಿ ಕೆಡಲಾರಂಭಿಸಿತು. ಲೋಕ ವಿರೋಧಿ ಶರಣನಾರಿಗಂಜುವವನಲ್ಲ ಎಂದು ಮೇಲುಕೀಳುಗಳಿಂದ ತುಂಬಿ ತುಳುಕುತ್ತಿದ್ದ ಸಮಾಜಕ್ಕೆ ಬಸವಣ್ಣನವರು ಸ್ಪಷ್ಟಪಡಿಸಿದಾಗ ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು ಎಂದು ಎದೆ ತಟ್ಟಿ ಹೇಳಿದಾಗ, ಸಾಮಾಜಿಕ ನ್ಯಾಯಕ್ಕಾಗಿ ಬಸವಣ್ಣ ಬಿಜ್ಜಳನಲ್ಲಿ ಉಂಟಾದ ವಾದ, ವಿವಾದ, ಹೋರಾಟ, ವೈಚಾರಿಕ ಕ್ರಾಂತಿ, ಅಂತರ್ಜಾತಿ, ವಿವಾಹದಿಂದಾಗಿ ಕಲ್ಯಾಣ ಕ್ರಾಂತಿ, ಎಲ್ಲವೂ ಚರಿತ್ರೆಯಲ್ಲಿ ದಾಖಲಾಗಿದೆ. ರಂಜಾನ್ ದರ್ಗಾ ಅವರ ಪ್ರಕಾರ ಶರಣರ ಹತ್ಯೆಯ ಬಗ್ಗೆ ಇತಿಹಾಸ ಮುಚ್ಚಿಹಾಕಿದೆ. ಆದರೂ ಬಿಜ್ಜಳನ ಅಧಿಕಾರವಾಧಿಯಲ್ಲಿ ಆತನ ಕೊಲೆಯಾಯಿತು ಎಂದು ಚರಿತ್ರೆ ಬಿಚ್ಚಿ ಹೇಳುತ್ತದೆ.

ದೇವಗಿರಿಯ ಯಾದವರು ಹೊಯ್ಸಳರ ಆಡಳಿತಕ್ಕೆ ಒಳಪಟ್ಟಿದ್ದಾರೆ. ಯಾದವರ ಇತಿಹಾಸವು ಕಲ್ಯಾಣ ಚಾಲುಕ್ಯರು ಮತ್ತು ಕಲಚೂರಿಗಳ ಅಧಿಪತ್ಯ ಕೊನೆಗೊಂಡ ನಂತರ ಇವರ ಆಡಳಿತ ಪ್ರಾರಂಭವಾಗುತ್ತದೆ. ಹೊಯ್ಸಳರಿಗೂ ಮತ್ತು ಯಾದವರಿಗೂ ಒಂದೇ ಹೆಸರಿನ ಬಿರುದುಗಳಿರುವುದು ನಾವು ಕಾಣುತ್ತೇವೆ. ಹೊಯ್ಸಳ ವೀರ ಬಲ್ಲಾಳನ ಬಿರುದನ್ನು ಕುರಿತು (ಹೊಸೂರು ಶಾಸನ) 'ಯಾದವ ನಾಯಾಯಣಂ ವೀರಬಲ್ಲಾಳದೇವಂ' ಎಂದು ಉಲ್ಲೇಖಿಸಿದೆ. ಯಾದವ ಬಿಲ್ಲಮನನ್ನು ಸೋಲಿಸಿದುದಕ್ಕಾಗಿ ಅವನ ಬಿರುದನ್ನು ಈತನು ಧರಿಸಿದಂತ ತೋರುತ್ತದೆ ಎಂದು ಧನವಂತ ಗೋ. ಹಾಜವಗೋಳ ತಮ್ಮ 'ಮುಳುಗುಂದ ನಾಡು-ಒಂದು ಅಧ್ಯಯನ'ದಲ್ಲಿ ವ್ಯಕ್ತಪಡಿಸಿದ್ದಾರೆ.

"ಯಾದಗಿರಿಯನ್ನು ಸಹ ಯಾದವರು ಆಳಿದ ಗಿರಿ, ಯಾದಗಿರಿ ಎಂಬ ವಾದ ಈ ಭಾಗದಲ್ಲಿ ಬಹಳ ಪ್ರಬಲವಾಗಿ ಕೇಳಿಬರುತ್ತದೆ. ಆದರೆ ಇದಕ್ಕೆ ಐತಿಹಾಸಿಕ ಆಧಾರಗಳಿಲ್ಲದಿರುವುದು ಸತ್ಯವಾದುದು. ಯಾದವರು ಬೀದರ ಜಿಲ್ಲೆ ದಾಟಿ ತಮ್ಮ ಸಾಮ್ರಾಜ್ಯ ವಿಸ್ತರಿಸಿರಲಿಲ್ಲ. ಇವರಿಗಿಂತ ಮುಂಚೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಕ್ರಿ.ಶ. ೯೭೩-೧೧೯೨ರ ಸಂದರ್ಭದಲ್ಲಿ ಯಾದಗಿರಿ ರಾಜಧಾನಿಯಾಗಿತ್ತು ಎಂಬ ಬಲವಾದ ಐತಿಹಾಸಿಕ ದಾಖಲೆಗಳಿವೆ. ಯಾದವರ ಬಗ್ಗೆ ಅವರ ಕಾಲದ ಯಾವ ಶಾಸನಗಳೂ ಈ ಪ್ರದೇಶ (ಯಾದಗಿರಿ)ದಲ್ಲಿ ಲಭ್ಯವಾಗಿಲ್ಲ. ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಇಮ್ಮಡಿ ಜಯಸಿಂಹನು ಕ್ರಿ.ಶ. ೧೦೧೮ರಲ್ಲಿ ಪಟ್ಟಕ್ಕೆ ಬಂದನು. ಜಯಸಿಂಹನಿಗೆ ಹಮ್ಮಾ ಅಥವಾ ಅವ್ವಲದೇವಿ ಎಂಬ ಮಗಳಿದ್ದಳು. ಸೇವುಣ ದೇಶದರಸು ಮುಮ್ಮಡಿ ವಲ್ಲಮನನ್ನು ಈಕೆ ಮದುವೆಯಾಗಿದ್ದಾಳೆಂದು ಪ್ರತೀತಿಯಿದೆ."[೯೭] ಈ ಅಂಶವನ್ನು ಗಮನಿಸಿದಾಗ ಯಾದವರು ಕಲ್ಯಾಣ ಚಾಲುಕ್ಯರ ಜೊತೆ ವೈವಾಹಿಕ ಸಂಬಂಧವನ್ನು ಬೆಳೆಸಿದರೆಂದು ತಿಳಿದುಬರುತ್ತದೆ. ಕಲಚೂರಿ ಅರಸರನ್ನು ಸೋಲಿಸಿದ ಯಾದವರು ಹೊಯ್ಸಳರ ಆಳ್ವಿಕೆಯನ್ನು ಗಮನಿಸಿ ಅವರನ್ನು ತಮ್ಮ ಮುಂದಿಟ್ಟುಕೊಂಡು ಆಡಳಿತ ನಡೆಸಿದರೆಂದು ಇತಿಹಾಸಕಾರರ ಅಭಿಪ್ರಾಯಪಡುತ್ತಾರೆ.

"ಬಿಲ್ಲಮನ ಕಾಲಕ್ಕೆ (ಕ್ರಿ.ಶ. ೧೧೮೭-೯೧) ಬಂದರೇಯ ಭದ್ರಬುನಾದಿ ಹಾಕಿದನು. ಇವನೇ ಯಾದಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು"[೯೮] ಇವರು ಮೊದಲು ರಾಷ್ಟ್ರಕೂಟರ, ಚಾಲುಕ್ಯರ, ಗಂಗರ ಸಾಮಂತರಾಗಿದ್ದುಕೊಂಡು ಬಂದವರಾಗಿದ್ದಾರೆ. ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಕೊನೆಗೊಂಡ ನಂತರ ಕಲಚೂರಿಗಳು ತಮ್ಮ ಸಾಮ್ರಾಜ್ಯದ ಆಡಳಿತವನ್ನು ಈ ಭಾಗದಲ್ಲಿ ಮುಂದುವರಿಸಿಕೊಂಡು ಬಂದರು. ಇವರಾದ ನಂತರ ಯಾದವರು ಬಸವಕಲ್ಯಾಣದಲ್ಲಿ ತಮ್ಮ ಸಾಮ್ರಾಜ್ಯದ ಆಳ್ವಿಕೆ ಮಾಡುತ್ತಾ ಇದ್ದಾಗ ಯಾದಗಿರಿಯನ್ನು ತಮ್ಮ ನೇರ ಆಡಳಿತಕ್ಕೆ ಒಳಪಡಿಸಿಕೊಂಡಿರಬೇಕು. ತನ್ನ ಸಾವಿನ ಮುನ್ಸೂಚನೆಯನ್ನು ಕಂಡ ಬಿಲ್ಲಮನು ತನ್ನ ಮಗ ಜೈತುಗಿಗೆ ಕ್ರಿ.ಶ. ೧೧೯೧ರಲ್ಲಿ ರಾಜ್ಯಭಾರವನ್ನು ವಹಿಸಿಕೊಟ್ಟನು. ೧೧೯೩ರಲ್ಲಿ ಬಿಲ್ಲಮನು ನಿಧನನಾದಾಗ ಜೈತುಗಿಯು ಸಿಂಹಾಸನವನ್ನೇರಿದನು. ತದನಂತರದಲ್ಲಿ ಚೈತ್ರಪಾಲನ ಮಗ ಸಿಂಘಣನು ಕ್ರಿ.ಶ. ೧೨೦೦ರಲ್ಲಿ ಪಟ್ಟಕ್ಕೆ ಬಂದನು.

ಸಿಂಘಣನು ಯಾದವ ಅರಸುಮನೆತನದಲ್ಲಿಯೇ ಪ್ರಬಲ ದೊರೆಯಾಗಿದ್ದನು. ತುಂಬಾ ಮಹಾತ್ವಾಕಾಂಕ್ಷಿಯಾಗಿದ್ದ ಈತನ ಆಡಳಿತಾವಧಿಯಲ್ಲಿ ಸೇವಣರು, ಶಕ್ತರೂ ಪ್ರಬಲರಾದರು. ಈತನು ಹೊಯ್ಸಳರನ್ನು ಸೋಲಿಸಿ ದಕ್ಷಿಣದಲ್ಲಿ ತನ್ನ ಏಕೈಕ ಅಧಿಪತ್ಯವನ್ನು ಸ್ಥಾಪಿಸಿದನು.

ರಾಜ್ಯ ವಿಸ್ತಾರ ಮಾಡುವುದು ಈತನ ಪ್ರಮುಖ ಧೋರಣೆಯಾಗಿತ್ತು. ಸುಮಾರು ೩೭ ವರ್ಷಗಳ ಕಾಲದಷ್ಟು ಧೀರ್ಘವಾಗಿ ಮಾಡಿದ್ದಾನೆ. ಈತನ ಆಸ್ಥಾನದಲ್ಲಿ ಕವಿಗಳು, ಜ್ಯೋತಿಷಿ

ಗಳಿದ್ದರೆಂದು ತಿಳಿದುಬರುತ್ತದೆ. ಸಿಂಘಣನ ತರುವಾಯ ಕ್ರಿ.ಶ. ೧೨೮೭ರಲ್ಲಿ ಬೈತುಗಿಯ ಮಗ ಕೃಷ್ಣನು ಪಟ್ಟಕ್ಕೆ ಬಂದನು. ಗುಲಬರ್ಗಾ ಜಿಲ್ಲೆ ಕೆಲವು ತಾಲ್ಲೂಕುಗಳಲ್ಲಿ ಸೇವುಣರ ಕಾಲದ ಶಾಸನಗಳು ಲಭ್ಯವಿದ್ದು, ಯಾದಗಿರಿ ತಾಲ್ಲೂಕಿನಲ್ಲಿ ಮಾತ್ರ ಲಭ್ಯವಾಗಿಲ್ಲ. ಜಿಲ್ಲೆಯ ಸುತ್ತಮುತ್ತ ಅನೇಕ ತಾಲ್ಲೂಕು ಪ್ರದೇಶದಲ್ಲಿ ಯಾದವರ ಶಾಸನಗಳು ಮತ್ತು ಅವರ ಆಡಳಿತವೂ ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ಯಾದಗಿರಿ ಪ್ರದೇಶವೂ ಸಹ ಅವರ ಆಡಳಿತ ಪ್ರದೇಶವಾಗಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಹೀಗೆ ದೇವಗಿರಿಯ ಯಾದವರು ಕಲೆ, ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಸಾಂಸ್ಕೃತಿಕ ಕ್ಷೇತ್ರಕ್ಕೆ ಪ್ರೋತ್ಸಾಹಕೊಟ್ಟಿದ್ದಾರೆಂದು ಜಿಲ್ಲೆಯ ಶಾಸನಗಳಿಂದ ತಿಳಿದುಬರುತ್ತದೆ.

**ವಿಜಯನಗರದ ಅರಸರು:**

"ದೇವಗಿರಿಯ ಯಾದವರ ಸಾಮ್ರಾಜ್ಯವು ಮುಸ್ಲಿಂರ ದಾಳಿಗೆ ತುತ್ತಾಗಿ ಪತನವಾದ ನಂತರ ಕರ್ನಾಟಕದ ರಾಜಕೀಯವು ಹರಿದು, ಹಂಚಿಹೋಯಿತು. ಅದೇ ಸಂದರ್ಭದಲ್ಲಿ ಮುಸ್ಲಿಮರ ದಾಳಿಯಿಂದ ಹಿಂದೂ ಸಂಸ್ಕೃತಿಯನ್ನು ಸಂರಕ್ಷಿಸಲು ಕ್ರಿ.ಶ.೧೩೩೬ರಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರು ವಿದ್ಯಾರಣ್ಯ ಗುರುಗಳ ಆರ್ಶೀವಾದ ಪಡೆದು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ತುಂಗಭದ್ರ ನದಿಯ ಬಲದಂಡೆಯಲ್ಲಿರುವ ಈಗಿನ ಪಂಪಾಕ್ಷೇತ್ರವೆಂದೇ ಹೆಸರು ಪಡೆದ ಹಂಪೆಯೇ ಈ ಸಾಮ್ರಾಜ್ಯದ ರಾಜಧಾನಿಯಾಯಿತು. ಇದು ಸುಮಾರು ಮುನ್ನೂರು ವರ್ಷಗಳ ಕಾಲ ಕರ್ನಾಟಕ ನಾಡನ್ನಾಳಿದ ಹೆಮ್ಮೆಯ ಮಹಾಸಾಮ್ರಾಜ್ಯವೆನಿಸಿಕೊಂಡು ಮೆರೆಯಿತು."[೨೯]

ವಿಜಯನಗರ ಅರಸರ ಕುರಿತು ಯಾದಗಿರಿಯ ಯಾವ ಭಾಗದಲ್ಲಿಯೂ ಶಾಸನಗಳಾಗಲಿ ಅವರ ಸಾಮ್ರಾಜ್ಯದ ಅವಶೇಷಗಳಾಗಲಿ ಲಭ್ಯವಾಗಿಲ್ಲ. ರಾಯಚೂರು ಮತ್ತು ಗುಲಬರ್ಗಾ ಪ್ರದೇಶವು ಈ ಅರಸರ ಆಡಳಿತಕ್ಕೆ ಒಳಪಟ್ಟಿದ್ದವು ಎಂಬುದಕ್ಕೆ ಶಾಸನಗಳು ಉಲ್ಲೇಖಿಸುತ್ತವೆ. ವಿಜಯನಗರದ ಸ್ಥಾಪಕರು ಹಂಪೆಯ ವಿರೂಪಾಕ್ಷನ ಭಕ್ತರಾಗಿದ್ದರು. ಈ ಮಹಾನ್ ಸಾಮ್ರಾಜ್ಯದ ಅರಸರನ್ನು ಉಲ್ಲೇಖಿಸುವ ತಾಮ್ರ ಶಾಸನವು ಶಹಾಪುರದ ಏಕದಂಡಗಿ ಮಠದಲ್ಲಿವೆ ಎಂದು ವರದಿಯಾಗಿವೆ. "ಇದು ಕೃಷ್ಣದೇವರಾಯನ ಕಾಲದ್ದೆಂದು ಹೇಳಲಾಗಿದೆ. ಈತನು ಅತ್ಯಂತ ಜನಪ್ರಿಯ ರಾಜನಾಗಿದ್ದನು. ಅಪ್ರತಿಮ ಸಾಮರ್ಥ್ಯವನ್ನು ಹೊಂದಿದವನೆಂದು ತಿಳಿದುಬರುತ್ತದೆ. ಈತನು ಗಣಪತಿಯನ್ನು ಸೋಲಿಸಿ ಆದಿಲ್‌ಖಾನನ್ನು ಡೋಣಿ, ಕೋವಿಲಕೊಂಡಗಳಲ್ಲಿ ಪರಾಭವಗೊಳಿಸಿ ಈ ವಿಜಯದ ನಂತರವೇ ೧೫೧೦ರಲ್ಲಿ ಪಟ್ಟಾಭಿಷೇಕ ಮಾಡಿಕೊಂಡನು"[೩೦] ಎಂದು ಇತಿಹಾಸದ ಪುಟದಿಂದ ತಿಳಿದುಬರುತ್ತದೆ. ತರುವಾಯ ವಿಜಾಪುರದ ಅರಸನನ್ನು

ಸೋಲಿಸಿ, ೧೫೨೦ರಲ್ಲಿ ವಿಜಾಪುರದಲ್ಲಿಯೇ ನಾಲ್ಕು ದಿನ ತಳವೂರಿದನು. ರಾಯಚೂರಿನ ದೋಅಬ್‌ಅನ್ನು ತನ್ನ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ, ಬೀದರ್‌ಗಳನ್ನು ಗೆದ್ದುಕೊಂಡನೆಂದು ತಿಳಿದುಬರುತ್ತದೆ. ಗುಲಬರ್ಗಾದಲ್ಲಿ ಸುಲ್ತಾನರ ಆಳ್ವಿಕೆಯನ್ನು ಚೇತನಗೊಳಿಸಿ, ತನ್ನ ಹತೋಟಿಯಲ್ಲಿಟ್ಟುಕೊಂಡಿದ್ದನು. ಕೃಷ್ಣದೇವರಾಯನ ರಾಜಕೀಯ ಅಪೂರ್ವ ಸಾಧನೆಯಿಂದಾಗಿ 'ಯವನ ರಾಜ್ಯಪ್ರತಿ ಸ್ಥಾಪನಾಚಾರ್ಯ' ಎಂಬ ಬಿರುದು ಪಡೆದನೆಂದು ತಿಳಿದುಬರುವುದು.

ಯಾದಗಿರಿಯನ್ನು ಕರ್ನಾಟಕದ ಅನೇಕ ರಾಜಮನೆತನಗಳು ಅಪರೋಕ್ಷವಾಗಿ ಆಳ್ವಿಕೆ ಮಾಡಿದ್ದನ್ನು ನಾವು ಕಾಣುತ್ತೇವೆ. ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಯಾದವರು, ಕಲಚೂರಿ ಅರಸರು ಈ ಭಾಗವನ್ನು ಆಳಿದ್ದಾರೆಂದು ಜಿಲ್ಲೆಯ ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರ ಅರಸರು ಯಾದಗಿರಿಯ ಭಾಗವನ್ನು ಆಳ್ವಿಕೆ ಮಾಡಿದ್ದಾರೆಂಬುದಕ್ಕೆ ಕಳಚೂರಿನ ಯುದ್ಧ ನಡೆಯಿತು. ಅಲ್ಲಿ ವಿಜಾಪುರದ ಅರಸರು ಸೋಲನ್ನು ಅನುಭವಿಸಿದರು. ಅಲ್ಲಿಗೆ ಅವರ ಸಾಮ್ರಾಜ್ಯದ ವಿಸ್ತರಣೆ ನಿಂತಿತು. ಅದಕ್ಕಾಗಿ ಕಡೇಚೂರು ಎಂಬ ಹೆಸರು ಬಂದಿದೆ ಎಂದು ಪ್ರತೀತಿಯಿದೆ. ಹೀಗೆ ಈ ಭಾಗವನ್ನು ಅಪರೋಕ್ಷವಾಗಿ ಆಳಿದ್ದು ಕಂಡುಬರುತ್ತದೆ. ಇದರಿಂದ ವಿಜಯನಗರ ಅರಸನ ರಾಜಕೀಯ ಆಡಳಿತವು ತನ್ನದೇ ಆದ ಮಹತ್ವದ ವಿಶಿಷ್ಟತೆಯನ್ನು ಪಡೆದುಕೊಂಡಿತ್ತೆಂದು ಹೇಳಲಾಗಿದೆ. ವಿಜಯನಗರ ಅರಸನ ನಂತರ ಯಾದಗಿರಿ ಭಾಗವು ಮುಸ್ಲಿಮರ ಆಳ್ವಿಕೆಗೆ ಸೇರಿತು ಎಂಬುದು ಸ್ಪಷ್ಟವಾಗುತ್ತದೆ.

### ಬಹುಮನಿ ಸುಲ್ತಾನರು

ಭಾರತದಲ್ಲಿ ಅನೇಕ ರಾಜಮನೆತನಗಳು ರಾಜ್ಯಭಾರ ಮಾಡಿದಂತೆ ಇಲ್ಲಿ ಮುಸ್ಲಿಂ ಅರಸು ಮನೆತನಗಳು ಆಳ್ವಿಕೆ ಮಾಡಿವೆ. ಹನ್ನೆರಡನೆಯ ಶತಮಾನದ ಅಂತ್ಯದ ಸಂದರ್ಭದಲ್ಲಿ ದೆಹಲಿ ಸುಲ್ತಾನರ ಸಾಮ್ರಾಜ್ಯವು ಸ್ಥಾಪನೆಯಾಯಿತು. ಇದು ಸುಮಾರು ನೂರು ವರ್ಷಗಳವರೆಗೂ ಈ ಸಾಮ್ರಾಜ್ಯವು ಕೇವಲ ಉತ್ತರ ಭಾರತದ ವ್ಯಾಪ್ತಿಗೆ ಒಳಪಟ್ಟಿತ್ತು. ದಖ್ಖನ್ ಪ್ರದೇಶವನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂಬ ಬಲವಾದ ಆಸೆ ಖಿಲ್ಜಿ ಸಂತತಿಯಿಂದ ಆರಂಭವಾಗುತ್ತದೆ. "ಕ್ರಿ.ಶ. ೧೩೦೭ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ತನ್ನ ನೆಚ್ಚಿನ ಸೇನಾಧಿಪತಿಯಾದ ಮಲ್ಲಿಕ್ ಕಾಫ್‌ರನು ದೇವಗಿರಿಯ ರಾಮಚಂದ್ರ ದೇವನಿಂದ ಬರಬೇಕಾದ ಕಪ್ಪ ವಸೂಲ ಮಾಡುವುದಕ್ಕೆ ತನ್ನ ರಾಯಭಾರಿಯನ್ನಾಗಿ ಕಳುಹಿಸುತ್ತಾನೆ. ಆಗ ಮಲ್ಲಿಕ್ ಕಾಫ್‌ರನು ರಾಮಚಂದ್ರದೇವನನ್ನು ಶಾಂತಿಯುತವಾಗಿ ಶರಣಾಗುವಂತೆ ಮಾಡುತ್ತಾನೆ. ಅನಂತರದಲ್ಲಿ ರಾಮಚಂದ್ರ ದೇವರು ದೆಹಲಿಯ ಸುಲ್ತಾನರ ಅಧೀನ ರಾಜನಾಗಿ ಆಳ್ವಿಕೆ ಮಾಡಿದನು. ಪುನಃ ೧೩೧೮ರಲ್ಲಿ ಅಲ್ಲಾವುದ್ದೀನ್‌ನು ದೇವಗಿರಿಯನ್ನು ಪೂರ್ಣ ತನ್ನ ಹತೋಟಿಗೆ ತೆಗೆದುಕೊಳ್ಳುವ ದೃಷ್ಟಿಯಿಂದ

ದಾಳಿಮಾಡಿ ಯಶಸ್ವಿಯಾಗುತ್ತಾನೆ. ಆಗ ದೇವಗಿರಿ ತನ್ನ ಹಿಂದೂ ಸಾಮ್ರಾಜ್ಯದ ಅಸ್ತಿತ್ವ ಕಳೆದುಕೊಂಡು ದೌಲತ್‌ಬಾದ್ ಎಂಬ ಹೆಸರು ಪಡೆದು ಪ್ರಸಿದ್ಧಿ ಹೊಂದಿತು."[೫೧]

ನಂತರ ಕ್ರಿ.ಶ. ೧೩೨೫ರಲ್ಲಿ ಮಹಮದ್ ಬಿನ್ ತುಘಲಕ್‌ನು ಅಧಿಕಾರಕ್ಕೆ ಬಂದನು. ಆಗ ದಖನ್ನಿನ ರಾಜಕೀಯ ಇತಿಹಾದದಲ್ಲಿ ಕೆಲವು ಗಮನಾರ್ಹವಾದ ಬದಲಾವಣೆಗಳಾದವು. ಈತನು ಸಂಪೂರ್ಣ ದಕ್ಷಿಣ ಪಥದ ಸಣ್ಣಪುಟ್ಟ ರಾಜರುಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ಉದ್ದೇಶ ಹೊಂದಿದ್ದನು. ಆಗ ಅನೇಕ ಹಿಂದೂ ಸಾಮ್ರಾಜ್ಯಗಳು ದೆಹಲಿ ಸುಲ್ತಾನರ ಸಾರ್ವಭೌಮತ್ವ ಪ್ರಶ್ನಿಸಿದವು. ಸ್ವತಂತ್ರ ಸಂಸ್ಥಾನಗಳಾಗಲು ಹವಣಿಸುತ್ತಿದ್ದವು. ಆಗ ಅಧಿಕಾರಕ್ಕೆ ಬಂದ ಎರಡೆ ವರ್ಷದಲ್ಲಿ ಸುಲ್ತಾನರು ದಖ್ಖನ್ನಿನ ಅನೇಕ ಪ್ರಾಂತ್ಯಗಳಲ್ಲಿ ಬಂಡಾಯವನ್ನು ಎದುರಿಸಬೇಕಾಯಿತು. ಮಹ್ಮದ್ ಬಿನ್ ತುಘಲಕ್‌ನ ವಿರುದ್ಧ ವಿವಿಧ ಪ್ರಾಂತ್ಯಗಳು ಬಂಡಾಯವೇಳಲು ಪ್ರಮುಖ ಕಾರಣವೇನೆಂದರೆ ಗುಲಬರ್ಗಾದಲ್ಲಿ ಬಹುಮನಿ ಷಾಹಿಗಳ ಸಾಮ್ರಾಜ್ಯ ಸ್ಥಾಪನೆಯಾಗುವ ಉದ್ದೇಶದಿಂದ ಹೇಳಲಾಗುತ್ತದೆ.

**ಬಹುಮನಿ ಸಾಮ್ರಾಜ್ಯ (೧೩೪೭–೧೫೨೭)**

ಕ್ರಿ.ಶ. ೧೩೪೫ರಲ್ಲಿ ಮಹಮ್ಮದ್ ಬಿನ್ ತುಘಲಕ್‌ನ ವಿರುದ್ಧ ಅನೇಕ ಪ್ರಾಂತ್ಯಗಳು ದಂಗೆ ಎದ್ದವು. ಆ ವೇಳೆಗೆ ದೌಲತಾಬಾದ ಪತನವಾಯಿತು. ಇದಕ್ಕೆ ಪ್ರಮುಖ ಕಾರಣನಾದ ದಕ್ಷಿಣಾಪಥದ ಆಫಗನ್ ರಾಜನಾದ ಇಸ್ಮಾಯಿಲ್ ಅಥವಾ ನಾಸಿಕ್ ಉದ್ ದೀನ್ ಷಾನು. ಇವನ ಸಮರ್ಥ ಅಧಿಕಾರಿಯಾದ ಹಸನ್ ಗಂಗು ಎಂಬುವವನಿಗೆ ತನ್ನ ನಾಯಕತ್ವದ ಜವಾಬ್ದಾರಿ ವಹಿಸಿಕೊಟ್ಟನು. ಆಗ ೧೩೪೭ರಲ್ಲಿ ಹಸನ್ ಗಂಗುವಿನ ಅನುಯಾಯಿಯಗಳೆಲ್ಲರು ಈತನನ್ನು ರಾಜನನ್ನಾಗಿ ಮಾಡಲು ಬೆಂಬಲಿಸಿದರು. ನಂತರ ಬಹುಮನಿ ಸಾಮ್ರಾಜ್ಯವೆಂದು ಇತಿಹಾಸದಲ್ಲಿ ಪ್ರಸಿದ್ಧಿಯನ್ನು ಪಡೆಯುವಂತೆ ರಾಜ್ಯವನ್ನು ಸ್ಥಾಪಿಸಿದನು. ಗುಲಬರ್ಗಾದ ಮಸೀದಿಯೊಂದರ ಪರ್ಶಿಯನ್ ಶಾಸನವು ಈತನಿಗೆ "ಸಿಖಂದರ್–ಇ–ಸಾನಿ ಅಲ್ಲಾವುದ್–ದಿನ್–ಹಸನ್ ಬಹುಮನ್ ಷಾ. ಅಲ್‌ವಲಿ" ಎಂಬ ಬಿರುದು ಇತ್ತೆಂದು ಉಲ್ಲೇಖಿಸುತ್ತದೆ. ಬಹುಮನಿ ಷಾ ಎಂಬುದು ಈತನ ಮನೆತನದ ಅಥವಾ ವಂಶದ ಮೂಲ ವ್ಯಕ್ತಿಯ ಹೆಸರು ಎಂಬ ಅಭಿಪ್ರಾಯವಿದೆ. ಈತನು ಸುಮಾರು ಹನ್ನೊಂದು ವರ್ಷಗಳ ಕಾಲ ರಾಜ್ಯಭಾರ ಮಾಡಿದರೂ ಹೆಚ್ಚಿನ ಕಾಲವನ್ನು ಯುದ್ಧ ಮತ್ತು ಸಂದಾನದ ಮಾತುಗಳಲ್ಲಿ ಕಳೆದನೆಂದು ತಿಳಿದುಬರುತ್ತದೆ. "ದೌಲತಾಬಾದ್‌ನ ಪರ್ಶಿಯನ್ ಶಾಸನದಲ್ಲಿ ಹಸನ್‌ಗಂಗುವನ್ನು ಸುಲ್ತಾನ ಅಬ್ದುಲ್ ಮುಸಾಫರ್ ಅಲ್ಲಾ–ಉದ್–ದೀನ್ ಬಹುಮನ್ ಷಾ"[೫೨] ಎಂದು ಹೆಸರಿಸಲಾಗಿದೆ. ಸುಲ್ತಾನ್ ಅಲ್ಲಾ–ದೀನ್ ಬಹುಮದ್ ಷಾ ನು ಅಧಿಕಾರಕ್ಕೆ ಬಂದ ಕೆಲವೇ ತಿಂಗಳಲ್ಲಿ

ಸ್ಥಳೀಯ ಅಮೀರರುಗಳ ಮತ್ತು ತುಘಲಕ್ ಅನುಯಾಯಿಗಳ ಪ್ರಬಲ ವಿರೋಧವನ್ನು ಎದುರಿಸಬೇಕಾಯಿತು. ಆಗ ವಾರಂಗಲ್‌ನ ಕಾಪಯ ನಾಯಕನನ್ನು ತನ್ನ ಮಾಂಡಲಿಕನನ್ನಾಗಿ ಮಾಡಿದನು. ಕ್ರಿ.ಶ. ೧೩೪೯ರಲ್ಲಿ ವಿಜಯನಗರದ ಗಡಿಗಳ ಮೇಲೆ ದಾಳಿ ಮಾಡಿ ರಾಯಚೂರನ್ನು ತನ್ನ ವಶಕ್ಕೆ ಪಡೆದುಕೊಂಡನು. ಈತನ ವಿವರಣೆಗಳು ಏನೇ ಇದ್ದರೂ ತಾನು ಮರಣ ಹೊಂದುವ ಸಮಯದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಹೊಂದಿದ್ದುದಲ್ಲದೆ ತನ್ನ ಆಡಳಿತವನ್ನು ತುಘಲಕ್‌ನ ತತ್ವಗಳ ಆಧಾರದ ಮೇಲೆ ಭದ್ರಪಡಿಸಿದ್ದನೆಂದು ಇತಿಹಾಸಕಾರರ ಅಭಿಪ್ರಾಯವಾಗಿದೆ.

"ಅಲ್ಲಾ-ಉದ್ದೀನ್ ಬಹಮನ್ ಷಾ. ತನ್ನ ರಾಜ್ಯವನ್ನು ನಾಲ್ಕು ತರಫ್ ಅಥವಾ ವಿಭಾಗಗಳನ್ನಾಗಿ ವಿಂಗಡಿಸಿದ್ದನೆಂದು ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖವಾದ ಹಸನಾಬಾದ್ ಗುಲಬರ್ಗಾ, ದೌಲಾತಾಬಾದ್ ಬೀದರ್ ಮತ್ತು ಕಂದಹಾರ್ ಹೀಗೆ ಈ ಪ್ರದೇಶಗಳಲ್ಲಿ ಗುಲಬರ್ಗಾವೇ ಮುಖ್ಯ ಆಡಳಿತ ಘಟಕವಾಗಿತ್ತು. ಆಡಳಿತ ನಿಯಂತ್ರಣವನ್ನು ಬಹುಮನ್‌ಷಾ ನಾ ತುಘಲಕ್‌ನ ಆಡಳಿತ ಪದ್ಧತಿಯಂತೆ ರೂಪಿಸಿದ್ದನು. ಆಯಾ ಅಧಿಕಾರಿಗಳ ಕಾರ್ಯಗಳು ಮತ್ತು ಹುದ್ದೆಗಳು ಈ ರೀತಿ ಇದ್ದವು. ಸಾಹಿಬ್-ಇ-ಅರ್ಜ್ (ಸೈನ್ಯವನ್ನು ಪರಿಶೀಲಿಸುವದು). ಕುರಬೇಗ್-ಇ-ಮಕ್‌ಸರನ್ (ಸೈನ್ಯ ವಿಭಾಗಾಧಿಕಾರಿ), ದಬೀರ್ (ಕಾರ್ಯದರ್ಶಿ), ದೀವಾನ್ (ಮಂತ್ರಿ), ದವತ್‌ದಾರ್ (ಮುದ್ರಾಧಿಕಾರಿ), ಹಾಜೀಬ್ ಉಲ್-ಕಾಸ್‌ಬಾಹ್ (ನಗರದ ಪೋಲಿಸ್ ಅಧಿಕಾರಿ). ಶಹ್ನಾ-ಇ-ಬರ್ಗಾ (ದರ್ಬಾ ಅಧಿಕಾರಿ), ಸರ್ ಪರದಾಹದಾರ್ (ನೆಪಥ್ಯಾಧಿಕಾರಿ)" ಈ ಮುಂತಾದವುಗಳು ಈ ರೀತಿಯ ತನ್ನ ಆಸ್ಥಾನದಲ್ಲಿ ಅಧಿಕಾರಿಗಳ ನೇಮಕ ಮಾಡಿಕೊಂಡು ಅವರವರಿಗೆ ಒಂದೊಂದು ಜವಾಬ್ದಾರಿಯುತ ಕಾರ್ಯಗಳನ್ನು ವಹಿಸಿಕೊಟ್ಟಿದ್ದನೆಂದು ತಿಳಿದುಬರುತ್ತದೆ. ಹೀಗೆ ಅಲ್ಲಾವುದ್ದೀನ್ ಬಹುಮನ್ ಷಾ ನು ಸುಮಾರು ಹನ್ನೊಂದು ವರ್ಷ ಸಮರ್ಥ ಆಡಳಿತ ನಡೆಸಿದನೆಂದು ಇತಿಹಾಸದ ಪುಟಗಳು ಸಾರಿ ಹೇಳುತ್ತವೆ.

ಗುಲಬರ್ಗಾ ಬಹಮನಿ ಸುಲ್ತಾನರ ರಾಜಧಾನಿಯಾದ ಮೇಲೆ ರಾಯಚೂರನ್ನು ಸಹ ತಮ್ಮ ವಶಕ್ಕೆ ತೆಗೆದುಕೊಂಡರು ಎಂದು ತಿಳಿದುಬರುತ್ತದೆ. ಇವರ ರಾಜ್ಯಾಡಳಿತ ರಾಯಚೂರುವರೆಗೆ ವಿಸ್ತರಿಸಿದೆ. ರಾಯಚೂರು ಮತ್ತು ಗುಲಬರ್ಗಾ ನಡುವೆ ಇರುವ ಯಾದಗಿರಿ ಸಹ ಸುಲ್ತಾನರ ಆಡಳಿತಕ್ಕೆ ಒಳಪಟ್ಟಿರಬೇಕೆಂದು ಕಂಡುಬರುತ್ತದೆ. ಏಕೆಂದರೆ ಯಾದಗಿರಿ ನಗರ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಮುಸ್ಲಿಂ ದೊರೆಗಳ ಆಡಳಿತ ಕಾಲದ ಅಧಿಕಾರಿ ವರ್ಗ, ಇಲ್ಲಿನ ಶಾಸನಗಳು, ಸ್ಮಾರಕಗಳು, ಹಲವು ಅವಶೇಷಗಳು ಕಂಡುಬರುವವು. ಯಾದಗಿರಿಯ ಗಿರಿದುರ್ಗದಲ್ಲಿ ಈ ಅರಸರ ದರ್ಬಾರ್, ಸ್ಮಾರಕಗಳು ಮಸೀದಿ ಶಾಸನಗಳು ಇನ್ನಿತರ ಅವಶೇಷಗಳು ಇವೆ. ಶಹ್ನಾ-ಇ-ಬರ್ಗಾ ದರ್ಬಾರ್, ಸ್ಮಾರಕಗಳು ಮಸೀದಿ ಶಾಸನಗಳು ಇನ್ನಿತರ ಅವಶೇಷಗಳು ಇವೆ. ಶಹ್ನಾ-ಇ-ಬರ್ಗಾ ದರ್ಬಾರ್ ಅಧಿಕಾರಿಗಳ ಅಜೀಜ್ ಅಹ್ಮದ್ ಶಹ್ನಾ ಹೇಳಿಕೊಳ್ಳುತ್ತಾರೆ.

ತಮ್ಮ ಮನೆಯ ಹಿರಿಯರು ಆಗಾಗ ಈ ಬಗ್ಗೆ ಹೇಳುತ್ತಿದ್ದರೆಂದು ನೆನಪಿಸಿಕೊಳ್ಳುತ್ತಾರೆ. ಆದರೆ ಈ ಬಗ್ಗೆ ಸ್ಪಷ್ಟ ಉಲ್ಲೇಖಗಳು ಸಂಶೋಧನೆಯ ಪರೀಧಿಗೆ ಲಭ್ಯವಾಗಬೇಕಿದೆ. ಈ ಮನೆಯ ಹಿರಿಯರಿಗೆ ಕೇಳಿದರೂ ಸಹ ಹಿಂದೆ ಮುಸ್ಲಿಂ ಅರಸರ ಕಾಲದಲ್ಲಿ ನಮ್ಮ ವಂಶದ ಮೂಲದವರು ರಾಜನ ಆಸ್ಥಾನಿಕ (ದರ್ಬಾರ್) ಅಧಿಕಾರಿಗಳಾಗಿದ್ದರು ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಅಲ್ಲಾ–ಉದ್–ದೀನ್ ಬಹುಮನ್ ಷಾನ ನಿಧನದ ತರುವಾಯ ಇವನ ಹಿರಿಯ ಮಗ ಮೊದಲನೇ ಮಹಮದ್ ಷಾನು ೧೩೫೮ರಲ್ಲಿ ಪಟ್ಟಕ್ಕೆ ಬಂದನು. ಈತನ ಆಡಳಿತದ ಅವಧಿಯಲ್ಲಿ ರಾಜಧಾನಿ ನಗರವಾದ ಗುಲಬರ್ಗಾದಲ್ಲಿ ಬೃಹತ್ ಕಟ್ಟಡಗಳನ್ನು ನಿರ್ಮಿಸಿದನು. ಆ ಕಾಲದ ಸೂಫಿ ಸಂತರಾದ ಶೇಕ್ ಫಾರಿಕ್ ಶೇಕ್ ಬಿಜಾಪುರಿ ಮತ್ತು ಶೇಕ್ ಜನಾದಿಗಳಿಗೆ ಆಶ್ರಯ ನೀಡಿದನು. ಈತನ ಅವಧಿಯಲ್ಲಿ ವಿಜಯನಗರ ಅರಸರೊಂದಿಗೆ ಮದಗಲ್‌ನಲ್ಲಿ ಭಾರಿ ಯುದ್ಧವಾಗುತ್ತದೆ. ಆಗ ವಿಜಯನಗರದರಸ ಬುಕ್ಕರಾಯನು ಸೋಲನ್ನನುಭವಿಸಿ ಬಹಮನಿ ಅರಸರ ರಾಜಾಜ್ಞೆಯನ್ನು ಗೌರವಿಸಿದನೆಂದು ತಿಳಿದುಬರುತ್ತದೆ. ಈತನ ತರುವಾಯ ಈತನ ಮಗ ಅಲ್ಲಾವುದ್ದೀನ್ ಮುಜಾಹಿದ ಕ್ರಿ.ಶ. ೧೩೭೬ರಲ್ಲಿ ಪಟ್ಟಕ್ಕೆ ಬಂದನು. ಈತನು ತಂದೆಯ ತತ್ವಗಳನ್ನೇ ಅನುಸರಿಸಿ ರಾಜ್ಯಭಾರ ಮಾಡಿದನು. ಮುಜಾಹಿದನ ಸೇನಾಧಿಕಾರಿಯಾದ ದೌದ್‌ಖಾನ್‌ನು ವಿಜಯನಗರ ಸೈನ್ಯದೊಂದಿಗೆ ದುರ್ಬಲ ಸೈನ್ಯವನ್ನು ಕೊಟ್ಟಿಕೊಂಡು ಸುಮಾರು ಒಂಬತ್ತು ತಿಂಗಳುಗಳ ಕಾಲ ಯುದ್ಧ ಮಾಡುತ್ತಾನೆ. ಇದನ್ನರಿತ ಮಜಾಹಿದನು ಇವನ ಮೇಲೆ ಕ್ರಮ ಕೈಕೊಳ್ಳಲು ನಿಶ್ಚಯಿಸಿದಾಗ ಇದನ್ನು ಮೊದಲೇ ಅರಿತ ದೌದ್‌ಖಾನ್‌ನು ಮೋಸದಿಂದ ಮುಜಾಹಿದನನ್ನು ಕೊಂದುಬಿಡುತ್ತಾನೆ. ತದನಂತರ ಗುಲಬರ್ಗಾದ ಸುಲ್ತಾನನೆಂದು ತಾನೇ ಘೋಷಿಸಿಕೊಂಡನು. ಇದಾದ ಕೇವಲ ಎರಡೇ ತಿಂಗಳಲ್ಲಿ ಮುಜಾಹಿದ್‌ನ ತಂಗಿಯು ದೌದ್‌ಖಾನನ್ನು ಮೋಸದಿಂದ ಕೊಂದು ಎರಡನೆಯ ಮಹಮದ್ ಷಾನನ್ನು ಪಟ್ಟಕ್ಕೆ ತರುತ್ತಾಳೆ.

ಕ್ರಿ.ಶ. ೧೩೭೮ರಲ್ಲಿ ಬಹುಮನಿ ಸಿಂಹಾಸನವನ್ನೇರಿದ ಎರಡನೆಯ ಮಹಮ್ಮದ್ ಷಾನು ಒಬ್ಬ ನಿಷ್ಠಾವಂತ ಆಡಳಿತಗಾರ ಮತ್ತು ಪಂಡಿತನೂ ಆಗಿದ್ದನು. ತನ್ನ ಆಸ್ಥಾನದಲ್ಲಿ ಸದರ್–ಇ–ಜಹಾನ್ (ಮುಖ್ಯ ನ್ಯಾಯಧೀಶ) ನನ್ನಾಗಿ ಫೆಜುಲ್ಲಾ ಅಂಜು ಎಂಬ ಪ್ರಸಿದ್ಧ ಪಂಡಿತನನ್ನು ನೇಮಕ ಮಾಡಿದ್ದನು. ಜನಹಿತಕಲ್ಯಾಣವೇ ಮಹಮ್ಮದ್ ಷಾನ ಮುಖ್ಯ ಉದ್ದೇಶವಾಗಿತ್ತು. ಈತನ ಕಾಲದಲ್ಲಿ ಗುಲಬರ್ಗಾದ ಮಸೀದಿ ಕಟ್ಟಿಸಿದ ವಿಷಯ ೧೩೯೪–೯೫ರ ಪರ್ಶಿಯನ್ ಶಾಸನವು (ಗುಲಬರ್ಗಾದಲ್ಲಿದೆ) ಉಲ್ಲೇಖಿಸುತ್ತದೆ. ಈತನ ತರುವಾಯ ಮಕ್ಕಳಾದ ಘಿಯಾಸುದ್ದಿನ್ ಮತ್ತು ಶಮ್ಸುದ್ದೀನ್ ಇಬ್ಬರು ಒಬ್ಬರ ತರುವಾಯ ಒಬ್ಬರು ಅಧಿಕಾರಕ್ಕೆ ಬಂದರೆಂದು ತಿಳಿದುಬರುತ್ತದೆ.

ಬಹುಮನಿ ಅರಸರಲ್ಲಿಯೇ ಅತ್ಯಂತ ಸುಪ್ರಸಿದ್ಧ ದೊರೆಯಾದ ಸುಲ್ತಾನ ಫಿರೋಜನು ೧೩೯೭ರಲ್ಲಿ ಪಟ್ಟಕ್ಕೆ ಬಂದನು. ಈತನು ತನ್ನ ಆಡಳಿತವನ್ನು ಪವಿತ್ರ ಕುರಾನ್ ಗ್ರಂಥದ ತತ್ವಗಳ ಆಧಾರದ ಮೇಲೆ ನಡೆಸಿದ ಕಾರಣ ಎಲ್ಲರಿಗೂ ಸಮಾನತೆ ದೊರೆಯುವಂತಾಯಿತು. ಅದರಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನಮಾನಗಳು ದೊರೆತವು. ದಕ್ಷ ಆಡಳಿತಗಾರನಾಗಿದ್ದ ತಾಜೋದ್ದೀನ್ ಫಿರೋಜನು ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದನು. ಈತನ ಆಸ್ಥಾನದಲ್ಲಿ ಒಳ್ಳೆಯ ಕವಿಗಳು, ಸಂಗೀತಗಾರರು, ತತ್ವಜ್ಞಾನಿಗಳು, ಇತಿಹಾಸಕಾರರು ಇದ್ದರೆಂದು ತಿಳಿದುಬರುವುದು. ಈತನನ್ನು ಇತಿಹಾಸಕಾರರು 'ಸುಲ್ತಾನ್–ಇ–ಫಸಿಯನ್' ಎಂದು ಕರೆದಿದ್ದಾರೆ. ಅಂದರೆ ಈತನು ಕರುಣಾಮಯಿಯೂ, ದಯಾಮಯಿಯೂ ಆಗಿದ್ದನು.

ಫಿರೋಜನು ವಿಜಯನಗರ ಮೇಲೆ ಮೂರು ಸಲ ದಂಡೆತ್ತಿ ಹೋದನು. ಖೇರ್ಲಾದ ನರಸಿಂಗರಾಯನು ಯುದ್ಧದಲ್ಲಿ ಪರಾಭವಗೊಂಡಾಗ ಅವನನ್ನು ಬಹಳ ಗೌರವಯುತವಾಗಿ ಕಂಡನೆಂದು ತಿಳಿದುಬುರತ್ತದೆ. ಸ್ವತಃ ಕವಿಯಾದ ಈನು ವಾಸ್ತುಶಿಲ್ಪ ಕಲೆಯಲ್ಲೂ ವಿಶೇಷ ಆಸಕ್ತಿ ವಹಿಸಿದ್ದನೆಂದು ಗುಲಬರ್ಗಾ ಹಾಗೂ ಫಿರೋಜಾಬಾದ್‌ಗಳಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ. ಸುಮಾರು ೨೫ ವರ್ಷಗಳ ಆಳ್ವಿಕೆ ಮಾಡಿದ ಈತನು ವಿಜಯನಗರ ಅರಸರ ವಿರುದ್ಧವೂ ಹೋರಾಟ ಮಾಡಬೇಕಾಯಿತು. ೧೪೦೯ರಲ್ಲಿ ವಿಜಯನಗರದ ಮೊದಲನೆಯ ದೇವರಾಯನೊಡನೆ ಯುದ್ಧಮಾಡಿ ವಿಜಯಿಯಾಗಿ ಆತನ ಮಗಳನ್ನು ವಿವಾಹವಾಗಿ ಬಂಕಾಪೂರವನ್ನು ವರದಕ್ಷಿಣೆ ರೂಪದಲ್ಲಿ ಪಡೆದನು. ಅನೇಕ ಸಾಧನೆಗಳ ಆಕಾಂಕ್ಷಿಯಾದ ಫಿರೋಜನು ಅನೇಕ ಪ್ರಾಂತ್ಯಗಳನ್ನೂ ಗೆಲ್ಲಲು ಹವಣಿಸುತ್ತಿರುವಾಗಲೇ ಒಮ್ಮೆ ಸೋಲುಂಟಾಗುತ್ತದೆ. ಇದೇ ಸಂದರ್ಭದಲ್ಲಿ ವಿಜಯನಗರದ ಸೈನ್ಯವು ಹಾನಗಲ್‌ನ್ನು ದಾಳಿ ಮಾಡಿ ತನ್ನ ವಶಕ್ಕೆ ತೆಗೆದುಕೊಳ್ಳುತ್ತದೆ. ಆಗ ಫಿರೋಜನಿಗೆ ಸೋಲುಂಟಾಗಿ ಅತೃಪ್ತಿ ಹೊಂದುತ್ತಾನೆ. ಅಷ್ಟಾದರೂ ರಾಯಚೂರಿನ ದೋ–ಅಬ್ ಅನ್ನು ಉಳಿಸಿಕೊಳ್ಳುತ್ತಾನೆ. ಮುಂದೆ ಸಣ್ಣಪುಟ್ಟ ದಂಗೆಗಳಾಗುತ್ತವೆ. ಆ ಸಂದರ್ಭದಲ್ಲಿ ಫಿರೋಜನು ತನ್ನ ಮಗನಾದ ಹಸನ್‌ನನ್ನು ಉತ್ತರಾಧಿಕಾರಿಯಾಗಿ ಮಾಡಬೇಕೆಂದು ಬಯಸುತ್ತಾನೆ. ಆಗ ಸೂಫಿ ಸಂತರಾದ ಹಜರತ್ ಗೇಸ್ ಬಂದೇ ನವಾಜರು ಫಿರೋಜನ ತಮ್ಮ ಅಹಮ್ಮದ ಶಾಹನ ಹೆಸರನ್ನು ಸೂಚಿಸುತ್ತಾರೆ. ಆಗ ಸಾತ್ವಿಕ ವ್ಯಕ್ತಿಯಾದ ಅಹ್ಮದ್ ಶಾಹನು ಪಟ್ಟಕ್ಕೆ ಬಂದನು. ಮುಂದೆ ಅಹಮ್ಮದ್ ಶಾಹನು ಗುಲಬರ್ಗಾ ರಾಜಧಾನಿಯನ್ನು ಕ್ರಿ.ಶ. ೧೪೨೨ರಲ್ಲಿ ಬೀದರಿಗೆ ಸ್ಥಳಾಂತರಿಸಿದನು. ಇದಾದ ಕೆಲವೇ ದಿನಗಳಲ್ಲಿ ಫಿರೋಜನು ನಿಧನನಾದನೆಂದು ತಿಳಿದುಬರುತ್ತದೆ. ಬಹುಮನಿ ಸುಲ್ತಾನ ಫಿರೋಜನು ನಿಧನನಾದ ನಂತರ ಈತನ ತಮ್ಮನಾದ ಅಹ್ಮದ್ ಷಾ ೧೪೨೨ರಲ್ಲಿ ಅಧಿಕಾರಕ್ಕೆ ಬಂದನು. ಈತನು ಅಧಿಕಾರಕ್ಕೆ ಬಂದ ಕೆಲವೇ ತಿಂಗಳಲ್ಲಿ ಮಾರ್ಗದರ್ಶಕರು ಹಾಗೂ ಪರಮಗುರು ಆಗಿದ್ದ ಸೂಫಿ ಸಂತ

ಹಜರತ್ ಗೇಸು ದರಾಜ್ ಅವರು ೧ನೇ ನವ್ಹೆಂಬರ್ ೧೪೨೨ರಂದು ಮರಣವನ್ನಪ್ಪಿದ. ಈ ಗುರುವಿನ ಸಾವಿನಿಂದ ತೀವ್ರ ನೋವುಂಟಾಗಿ ಅಹಮ್ಮದ್ ಷಾನು ದಿಗ್ಭ್ರಮೆಗೊಳ್ಳುತ್ತಾನೆ. ಗುರುವಿನ ಸಾವಿನಿಂದ ಆತನಿಗೆ ಎಲ್ಲಾ ಶೂನ್ಯವೆನಿಸುತ್ತದೆ. ಪರಿಸರ ಅಧೋಗತಿಗೀಡಾಗುತ್ತದೆ. ಹೀಗಾಗಿ ಅಹ್ಮದ್ ಷಾನು ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಿಗೆ ವರ್ಗಾಯಿಸುತ್ತಾನೆ. ಮುಂದೆ ಅಹಮ್ಮದ್ ಷಾನು ಹೃದಯಾಘಾತದಿಂದ ೧೪ನೇ ಜುಲೈ ೧೪೩೬ರಲ್ಲಿ ನಿಧನನಾದನು. ಈತನ ತರುವಾಯ ಇವನ ಜೇಷ್ಠ ಪುತ್ರ ಜಾಫರ್ ಖಾನ್‌ನು ಎರಡನೆಯ ಅಲ್ಲಾವುದ್ದೀನ್ ಅಹಮದ್ ಎಂಬ ಹೆಸರನ್ನು ಧರಿಸಿ ಪಟ್ಟಕ್ಕೆ ಬಂದದ್ದು ಕಾಣುತ್ತೇವೆ. ಮುಂದೆ ೧೪೫೮ರಲ್ಲಿ ಇವನ ಮಗನಾದ ಹುಮಾಯುನ್ ಷಾ ಪಟ್ಟಕ್ಕೆ ಬಂದನು. ಈತನು ಮಹಮ್ಮದ್ ಗವಾನನ್ನು ಪ್ರಧಾನಮಂತ್ರಿಯಾಗಿ ಇತಿಹಾಸದಲ್ಲಿ ಒಬ್ಬ ಸಮರ್ಥ ಆಡಳಿತಗಾರನೆಂದು ಜನಪ್ರಿಯತೆ ಗಳಿಸಿಕೊಂಡಿದ್ದನು. ಈತನು ಅರೇಬಿಯಾದ ಗಿಲಾನ್‌ನಿಂದ ವ್ಯಾಪಾರಕ್ಕೋಸ್ಕರ ೧೪೫೩ರಲ್ಲಿ ಇಲ್ಲಿಗೆ ಬಂದನೆಂದು ಪ್ರತೀತಿಯಿದೆ. ಶಿಕ್ಷಣ ಕ್ಷೇತ್ರಕ್ಕೆ ಈತನು ಅಪಾರ ಸೇವೆ ಸಲ್ಲಿಸಿದ್ದಾನೆಂದು ತಿಳಿದುಬರುವುದು. ಬೀದರಿನ ಮದರಸಾ ವಿಶ್ವವಿದ್ಯಾಲಯವು ಮಹಮ್ಮದ ಗವಾನನ ಕಾಲದಲ್ಲಿ ನಿರ್ಮಾಣವಾಗಿದೆಯೆಂದು ಕಂಡುಬರುತ್ತದೆ. ಹೀಗೆ ಈತನು ಒಬ್ಬ ಉತ್ತಮ ದಕ್ಷ ಆಡಳಿತಗಾರನಾಗಿದ್ದು, ಸಮರ್ಥ ರೀತಿಯಲ್ಲಿ ಆಡಳಿತ ನಡೆಸಿದನೆಂದು ತಿಳಿದುಬರುತ್ತದೆ.

ಮುಂದೆ ಕ್ರಿ.ಶ. ೧೪೯೨ರಲ್ಲಿ ಅಮೀರ ಬರೀದನು ಒಂದು ಸ್ವಾತಂತ್ರ ರಾಜ್ಯವನ್ನು ಸ್ಥಾಪಿಸಿಕೊಂಡು, ತನ್ನ ಸುತ್ತಮುತ್ತಲಿನ ಅನೇಕ ಪ್ರದೇಶವನ್ನು ಆಳಿದನು. ನಂತರ ಈತನ ಮಗನಾದ ಅಲಿ ಬರಿದನು ಸಿಂಹಾಸನವನ್ನೇರಿದನು. ಇವನಿಗೆ ಶಹಾ ಎಂಬ ಬಿರುದು ಇತ್ತೆಂದು ತಿಳಿದುಬರುತ್ತದೆ. ತದನಂತರದಲ್ಲಿ ಇವರ ತರುವಾಯ "ಇಬ್ರಾಹಿಂ : ಖಾಸಿಂಬರೀದ ಮತ್ತು ಮಿರ್ಜಾ ಅಲಿ ಬರಿದನು ರಾಜ್ಯವಾಳಿದರೆಂದು ಸ್ಪಷ್ಟವಾಗುತ್ತದೆ."[೪] ಮುಂದೆ ಕೊನೆಯ ಅರಸನಾದ ಅಲಿಬರೀದನು ಬಿಜಾಪುರದ ಆದಿಲ್ ಶಾಹಾ ದೊರೆಗಳನ್ನು ಸೋಲಿಸಿ, ಬೀದರನ್ನು ತಮ್ಮ ವಶಕ್ಕೆ ತೆಗೆದುಕೊಂಡನು. ಬಹುಮನಿ ಸುಲ್ತಾನರ ಅವಶೇಷಗಳು, ಶಾಸನಗಳು ಖಚಿತವಾಗಿ ಯಾದಗಿರಿ ತಾಲ್ಲೂಕಿನಲ್ಲಿ ಇಲ್ಲಿಯವರೆಗೆ ಲಭ್ಯವಾಗಿಲ್ಲ.

### ಬಿಜಾಪುರದ ಆದಿಲ್ ಷಾಹಿಗಳು

ಬಹುಮನಿ ಸಾಮ್ರಾಜ್ಯವು ಪತನಗೊಂಡ ನಂತರ ವಿಜಾಪೂರದ ಆದಿಲ್ ಷಾಹಿಗಳ ಸಾಮ್ರಾಜ್ಯವು ಪ್ರಮುಖ ಪಾತ್ರ ವಹಿಸುತ್ತದೆ. ಬಹಮನಿ ಅರಸರ ಕಾಲದಲ್ಲಿಯೇ ವಿಜಾಪೂರ ಪ್ರಾಂತ್ಯದ ಅಧಿಕಾರಿಯಾಗಿದ್ದ ಯೂಸುಫ್ ಆದಿಲ್ ಖಾನನು ೧೪೮೯ರಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಬೇಕೆಂಬ ಹಂಬಲ ಹೊಂದಿದನು. ದಖ್ಖನ್ನಿನ ಪ್ರಮುಖ ರಾಜಗುರುಗಳಲ್ಲೊಬ್ಬನಾಗಿದ್ದ

ಈತನು ಹಿಂದೂ ಪ್ರಜೆಗಳನ್ನು ಅತ್ಯಂತ ಆತ್ಮೀಯತೆ ಗೌರವದಿಂದ ನೋಡಿಕೊಳ್ಳುತ್ತಿದ್ದನು. ೧೫೧೦ ರಲ್ಲಿ ವಿಜಯನಗರ ಅರಸರ ವಿರುದ್ಧ ಯುದ್ಧ ಮಾಡಿದ ಸಂದರ್ಭದಲ್ಲಿಯೇ ಯೂಸುಫ್‌ಖಾನನು ನಿಧನನಾದನು. ಆಲ್ ಷಾನ ನಂತರ ಅವನ ಮಗನಾದ ಇಸ್ಮಾಯಿಲ್ ಪಟ್ಟಕ್ಕೆ ಬರುತ್ತಾನೆ. ಈತನು ವಿಜಯನಗರದ ಕೃಷ್ಣದೇವರಾಯನಿಂದ ೧೫೧೨ರಲ್ಲಿ ಕೃಷ್ಣ ದೇವರಾಯನು ನಿಧನದ ನಂತರ ರಾಯಚೂರು, ಮುದಗಲ್ ಮತ್ತು ಬೆಳಗಾವಿಯನ್ನು ಪುನಃ ಗೆದ್ದುಕೊಂಡನೆಂದು ಅನೇಕ ಆಕರಗಳು ಉಲ್ಲೇಖಿಸುತ್ತವೆ.

ಇಸ್ಮಾಯಿಲ್‌ನ ಮರಣದ ನಂತರ ಆತನ ಮಗನಾದ ಒಂದನೆಯ ಇಬ್ರಾಹಿಂನು ಬಿಜಾಪುರದ ಸುಲ್ತಾನನಾಗುತ್ತಾನೆ. ಈತನ ಆಡಳಿತ (೧೫೩೫–೫೮) ಅವಧಿಯಲ್ಲಿ ಮೊದಲ ಬಾರಿಗೆ ಕನ್ನಡ ಮತ್ತು ಮರಾಠಿ ಭಾಷೆಗಳನ್ನು ಅಧಿಕೃತ ಭಾಷೆಗಳೆಂದು ಜಾರಿಗೆ ತಂದನು. "ಮೊದಲನೇ ಇಬ್ರಾಹಿಂ ಆದಿಲ್‌ಷಾನ ಕಾಲದಲ್ಲಿ ಯಾದಗಿರಿ ಆತನ ನೇರ ಆಡಳಿತಕ್ಕೊಳಪಟ್ಟಿರ ಬೇಕೆಂದು ಇಲ್ಲಿನ ಶಾಸನಗಳು ಸಾಕ್ಷಿ ನೀಡುತ್ತವೆ. ಯಾದಗಿರಿ ಗಿರಿದುರ್ಗದೊಳಗಿರುವ ಮೋತಿ ತಲಾಬಿನ ಗೋಡೆಯ ಮೇಲಿರುವ ಶಾಸನವೊಂದು ಒಂದನೇ ಇಬ್ರಾಹಿಂ ಆದಿಲ್ ಷಾನ ಕಾಲಕ್ಕೆ ಸೇರಿತ್ತು. ಈತನು ೧೫೮೭ರಲ್ಲಿ ಗಿರಿದುರ್ಗದಲ್ಲಿನ ಮೋತಿ ತಲಾಬನ್ನು ನಿರ್ಮಿಸಿದನೆಂದು ಈ ಶಾಸನವು ಉಲ್ಲೇಖಿಸುತ್ತದೆ."[೫೫] ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ನೇರ ಆಡಳಿತಕ್ಕೊಳಪಟ್ಟ ಈ ಗಿರಿದುರ್ಗವು ಹದಿನಾರನೆಯ ಶತಮಾನದಲ್ಲಿ ವಿಜಾಪುರದ ಆದಿಲ್‌ಷಾಹಿ ಅರಸರ ಆಳ್ವಿಕೆಯ ಕಾಲದಲ್ಲಿ ಬಹಳಷ್ಟು ಮಾರ್ಪಾಡಾಗಿದೆಯೆಂದು ತಿಳಿದುಬರುತ್ತದೆ.

ಮುಂದೆ ಈತನ ಮಗನಾದ ಒಂದನೇ ಅಲಿ ಆದಿಲ್ ಷಾನ ಆಳ್ವಿಕೆಯ ಕಾಲದಲ್ಲಿ ಯಾದಗಿರಿ ಅಥಾರ್ ಮಸೀದಿಯ ದ್ವಾರದ ಮೇಲಿರುವ ಶಾಸನವು "ಕ್ರಿ.ಶ. ೧೫೭೩ರಲ್ಲಿ ಮೂರ್ಜಾ ಅಲಿಯ ಮಗನಾದ ಖ್ವಾಜಾ ಹಸನ್ ಹೀಗೆ ಯಾದಗಿರಿಯು ಕಾಲದಿಂದ ಕಾಲಕ್ಕೆ ಅನೇಕ ಅರಸರ ಆಳ್ವಿಕೆಗೆ ಒಳಪಟ್ಟಿದೆ ಎನ್ನುವುದಕ್ಕೆ ಇಲ್ಲಿನ ಶಾಸನಗಳೇ ಸಾಕ್ಷಿ ಒದಗಿಸುತ್ತವೆ."[೫೬]

ಆದಿಲ್‌ಷಾಹಿ ಅರಸುಮನೆತನಗಳಲ್ಲಿ ಸಮರ್ಥ ಅರಸನಾಗಿ ಇಮ್ಮಡಿ ಇಬ್ರಾಹಿಂನು ಆಳ್ವಿಕೆ ಮಾಡುತ್ತಾನೆ. ಈತನ ಕಾಲದಲ್ಲಿ ಕಲೆ ಮತ್ತು ವಾಸ್ತು ಶಿಲ್ಪಗಳಲ್ಲಿ ಹೆಚ್ಚಿನ ಮಹತ್ವ ಕೊಟ್ಟನೆಂದು ತಿಳಿದು ಬಿಜಾಪುರದಲ್ಲಿರುವ ಇಬ್ರಾಹಿಂ ರೋಜಾ ಕಟ್ಟಡವು ಈತನ ಕಾಲದ್ದೇ. ಇದು ಅತ್ಯಂತ ಸುಂದರ ವಾಸ್ತು ರಚನೆಯಿಂದ ಕೂಡಿದ್ದು, ಭವ್ಯತೆಯ ಪ್ರತೀಕವಾಗಿದೆ. ಮಹಮದ್ ಆದಿಲ್‌ಷಾನು ಸಮರ್ಥ ಆಡಳಿತಗಾರನಾಗಿದ್ದು, ವಿಜಾಪುರದ ವಿಶ್ವವಿಖ್ಯಾತ ಗೋಲ್ ಗುಂಬಜ್ ಕಟ್ಟಡವನ್ನು ಕಟ್ಟಿಸಿದನೆಂದು ತಿಳಿದುಬರುವುದು. ಕೊನೆಯದಾಗಿ ಎರಡನೆಯ ಅಲಿ ಆದಿಲ್ ಷಾನು, ಆದಿಲ್ ಷಾ ದೊರೆಗಳಲ್ಲಿ ಅತ್ಯಂತ ಪರಾಕ್ರಮ ಶಾಲಿಯಾಗಿದ್ದನು.

ಒಮ್ಮೆ ಮುಗಲ್ ಸೇನಾಧಿಪತಿ ಜೆಸಿಂಗ್‌ನು ವಿಜಾಪೂರದ ಮೇಲೆ ದಂಡೆತ್ತಿ ಬಂದು ಮುತ್ತಿಗೆ ಹಾಕಿದಾಗ ಎರಡನೆಯ ಅಲಿ ಆದಿಲ್ ಷಾನು ಕೆಚ್ಚೆದೆಯಿಂದ ಎದುರಿಸಿ ಹಿಮ್ಮೆಟ್ಟಿಸಿದನು. ಈತನು ೧೬೭೨ರಲ್ಲಿ ನಿಧನನಾದ ಮೇಲೆ ವಿಜಾಪುರದ ಆದಿಲ್‌ಷಾಹಿ ಸಾಮ್ರಾಜ್ಯದ ವೈಭವವು ಕಣ್ಮರೆಯಾಯಿತು. ಮುಂದೆ ಬಿಜಾಪುರವು ಔರಂಗಜೇಬನ ನೇತೃತ್ವದ ಮೊಗಲರ ಆಳ್ವಿಕೆಗೆ ಒಳಪಟ್ಟಿತು.

## ನಿಜಾಮ ವಂಶದ ಉದಯ

ಮೊಗಲ್ ಸಾಮ್ರಾಜ್ಯದ ಚಕ್ರವರ್ತಿ ಔರಂಗಜೇಬನು ನಿಧನನಾದ ನಂತರ ಮೊಗಲ ಸಾಮ್ರಾಜ್ಯವು ಪತನಗೊಂಡಿತು. ಇಂತಹ ಒಂದು ಪ್ರಬಲ ಸಾಮ್ರಾಜ್ಯವು ಪತನಗೊಂಡಾಗ ಔರಂಗಜೇಬನ ನೆಚ್ಚಿನ ದಂಡನಾಯಕನಾದ ನಿಜಾಮ ಉಲ್ ಮುಲ್ಕ್ ಅಸಫ್‌ಜಾಹನು ಕ್ರಿ.ಶ. ೧೭೨೪ರಲ್ಲಿ ಸ್ವತಂತ್ರವಾಗಿ ರಾಜ್ಯಭಾರ ನಿರ್ವಹಿಸಿದನು. ಅಸಫಿಯಾ ರಾಜವಂಶದ ಈ ನಿಜಾಮ ಉಲ್ ಮಲ್ಕ್‌ನ ವಂಶದವರೂ, ಕ್ರಿ.ಶ. ೧೭೨೪ರಿಂದ ಕ್ರಿ.ಶ. ೧೯೪೮ರವರೆಗೆ ಸುಮಾರು ೨೨೪ ವರ್ಷಗಳ ಎರಡು ಕಾಲು ಶತಮಾನಗಳವರೆಗೆ ರಾಜ್ಯಭಾರ ಮಾಡುತ್ತಾರೆ. ಈ ರಾಜವಂಶದ ನಿಜಾಮರು ತಮ್ಮನ್ನು ಮೊಗಲರ ಉತ್ತರಾಧಿಕಾರಿಗಳೆಂದೇ ಕರೆದುಕೊಂಡಿದ್ದಾರೆ.

ನಿಜಾಮ ಉಲ್-ಮುಲ್ಕ್‌ನು ದೊರೆಯಾಗುವ ಮುನ್ನ ಮೊಗಲ್ ಚಕ್ರವರ್ತಿ ಆಸ್ಥಾನದಲ್ಲಿ ಅಧಿಕಾರಿಯಾಗಿದ್ದಾನೆ. ಮೊಗಲರ ಆಸ್ಥಾನದಲ್ಲಿ ವಜೀರ್ (ಪ್ರಧಾನಿ) ಆಗುವ ಅವಕಾಶ ಬಂದಾಗ ಸೂಕ್ಷ್ಮಮತಿ ಚುರುಕು ಸ್ವಭಾವದ ನಿಜಾಮ ಉಲ್-ಮಲ್ಕ್‌ನ ಅದನ್ನು ನಿರಾಕರಿಸುತ್ತಾನೆ. ಮುಂದೆ ಈತನು ಔರಂಗಜೇಬನ ಮರಣದ ನಂತರ ಕ್ರಿ.ಶ.೧೭೧೩ರಲ್ಲಿ ದಖ್ಖನ್ನಿನ ಸುಬೇದಾರನಾಗಿ ನೇಮಕಗೊಳ್ಳುತ್ತಾನೆ.

ಮುಂದೆ ಕೆಲವು ವರ್ಷಗಳ ನಂತರ ನಿಜಾಮ ಉಲ್-ಮುಲ್ಕ್‌ನನ್ನು ದೆಹಲಿಯಲ್ಲಿ ವಜೀರ್ ಆಗಿ ನೇಮಕ ಮಾಡಲಾಯಿತು. ಈ ಹುದ್ದೆಯಲ್ಲಿ ಈತನಿಗೆ ಆಸಕ್ತಿ ಇಲ್ಲದ ಕಾರಣ ಈ ಹುದ್ದೆಗೆ ರಾಜೀನಾಮೆ ನೀಡಿ ಮರಳಿ ೧೭೨೪ರಲ್ಲಿ ದಖ್ಖನ್ನಿಗೆ ಬರುತ್ತಾನೆ. ದಕ್ಷಿಣದ ಮೊಗಲ್ ಪ್ರಾಂತ್ಯಗಳನ್ನು ತನ್ನ ಹತೋಟಿಗೆ ತೆಗೆದುಕೊಂಡು ಮುಸೀ ನದಿಯ ಬಳಿಯಲ್ಲಿದ್ದ ಹೈದರಾಬಾದ ನಗರವನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಈತನಿಗೆ ಅಸಫ್‌ಜಾಹ ಎಂಬ ಬಿರುದು ನಂತರ ನೀಡಲಾಯಿತು ಎಂದು ಗೊತ್ತಾಗುತ್ತದೆ.

ಅಸಫ್‌ಜಾಹನು ೧೭೪೮ರಲ್ಲಿ ಮರಣ ಹೊಂದುವ ಸಮಯಕ್ಕೆ ತನ್ನ ದಕ್ಷಿಣ ಸಾಮ್ರಾಜ್ಯವನ್ನೆಲ್ಲಾ ಸುಭದ್ರಪಡಿಸಿಕೊಂಡಿದ್ದನೆಂದು ಗೋಚರಿಸುತ್ತದೆ. ಈತನ ಮರಣದ ನಂತರ ಈತನ ತಮ್ಮನಾದ ಸಲಬತಜಂಗನು ಅಧಿಕಾರಕ್ಕೆ ಬಂದನು. ಹೀಗೆ ನಿಜಾಮ ವಂಶದ

ನಿಜಾಮ ಅಲಿಖಾನ, ಸಿಕಂದರ ಜಾ ಬಹುದ್ದೂರ ನಾಸಿರದೌಲಾ ಅಫಜಲದ್ದೌಲಾ, ಮೀರ ಮಹಬೂಬ ಅಲಿಖಾನ್, ಮೀರ ಉಸ್ಮಾನ ಅಲಿಖಾನರ ಆಡಳಿತವು ೧೯೪೮ರವರೆಗೂ ಮುಂದುವರಿದು ಕೊನೆಗೊಳ್ಳುತ್ತದೆ. ಇವರೆಲ್ಲರ ಇತಿಹಾಸವು ಮುಂದಿನ ರಾಷ್ಟ್ರೀಯ ಚಳುವಳಿ ಮತ್ತು ಹೈದರಾಬಾದ ಕರ್ನಾಟಕ ಏಕೀಕರಣ ಚಳುವಳಿ ಹಾಗೂ ಯಾದಗಿರಿ ಎಂಬ ಅಧ್ಯಾಯದಲ್ಲಿ ಉಲ್ಲೇಖಿಸಲಾಗಿದೆ. ಮುಂದಿನ ಅಧ್ಯಾಯದಲ್ಲಿ ಬಂದಿರುವುದರಿಂದ ಇಲ್ಲಿ ಹೆಚ್ಚು ಉಲ್ಲೇಖಿಸಿಲ್ಲ. ಯಾದಗಿರಿಯು ರಾಜಕೀಯ ಪರಂಪರೆಯಿಂದ ನೋಡಿದಾಗ ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೂ ನಡೆದು ಬಂದಿರುವುದು ಕಾಣುತ್ತೇವೆ.

ಅಡಿಟಿಪ್ಪಣಿಗಳು:

೧. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೪.

೨. ಅದೇ, ಪುಟ-೭೮

೩. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೧೨.

೪. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೧೪.

೫. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೩೮

೬. ಶಿವತಾರಕ್ ಕೆ.ಬಿ.; ಕರ್ನಾಟಕ ಪುರಾತತ್ವ ಶೋಧ.

೭. ಇಂಡಿಯನ್ ಆರ್ಕಾಲಿಜಿ ರಿಸರ್ಚ್, ೧೯.೭೪-೭೫, ಪುಟ-೧೯.

೮. ಶಿವತಾರಕ್ ಕೆ.ಬಿ.; ಕರ್ನಾಟಕ ಪುರಾತತ್ವ ಶೋಧ, ಪುಟ-೨೦೫.

೯. ಅದೇ, ಪುಟ-೨೦೫

೧೦. ಅದೇ, ಪುಟ-೨೦೬.

೧೧. ಲಕ್ಷ್ಮಣ ತೆಲಗಾವಿ; ಮೌರ್ಯ ಮತ್ತು ಶಾತವಾಹನ ಯುಗ, ಪುಟ-೭೮.

೧೨. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; (ಪಿಎಚ್.ಡಿ. ಮಹಾಪ್ರಬಂಧ) ೨೦೦೫, ಪುಟ-೫೫

೧೩. ಜಿ.ಎಸ್.ಶಿವರುದ್ರಪ್ಪ (ಸಂ); ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೧, ಪುಟ-೨೯.

೧೪. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೪೫

೧೫. ಸಿ.ಆರ್.ಮುಜುಂದಾರ್; ಎಜ್ ಆಫ್ ಎಂಪಾಯರ್, ಕನೋಜ, ಪುಟ-೧೬.

೧೬. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; (ಪಿಎಚ್.ಡಿ. ಮಹಾಪ್ರಬಂಧ) ೨೦೦೫, ಪುಟ-೫೩

೧೭. ಎಚ್. ತಿಪ್ಪೇರುದ್ರಸ್ವಾಮಿ; ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ-೩೧೫.

೧೮. ಗವಿಸಿದ್ದಪ್ಪ ಎಚ್. ಪಾಟೀಲ; ಕುಕನೂರು ಒಂದು ಸಾಂಸ್ಕೃತಿಕ ಅಧ್ಯಯನ; ಪುಟ-೬೭.

೧೯. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; (ಪಿಎಚ್.ಡಿ. ಮಹಾಪ್ರಬಂಧ) ೨೦೦೫, ಪುಟ-೫೭

೨೦. ಮುಳುಗುಂದ ನಾಡು ಒಂದು ಅಧ್ಯಯನ, ಪುಟ-೩೩.

೨೧. ಡಿ.ಎನ್. ಅಕ್ಕಿ; ದೀಪಾವಳಿ ವಿಶೇಷಾಂಕ, ಪುಟ-೫೫.

೨೨. ಹನುಮಾಕ್ಷಿ ಗೋಗಿ; ಅನುಶಾಸನ, ಪುಟ-೨೭೭.

೨೩. ಅದೇ, ಪುಟ-೨೭೭

೨೪. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; ಪಿಎಚ್.ಡಿ. ಮಹಾಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫, ಪುಟ-೫೯.

೨೫. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೪೯.

೨೬. ಮುಳುಗುಂದ ನಾಡು ಒಂದು ಅಧ್ಯಯನ, ಪುಟ-೩೧.

೨೭. ಹನುಮಾಕ್ಷಿ ಗೋಗಿ; ಅನುಶಾಸನ; ಪುಟ-೨೪೮.

೨೮. ಅದೇ, ಪುಟ-೨೮೦.

೨೯. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೫೦.

೩೦. ಹನುಮಾಕ್ಷಿ ಗೋಗಿ; ಅನುಶಾಸನ; ಯಾದಗಿರಿ ಅಪ್ರಕಟಿತ ಶಾಸನಗಳು; ಪುಟ-೨೬೬.

೩೧. ಅದೇ, ಪುಟ-೨೬೬

೩೨. ಅದೇ, ಪುಟ-೨೬೭.

೩೩. ಅದೇ, ಪುಟ-೨೬೮-೨೬೯.

೩೪. ಅದೇ, ಪುಟ-೨೭೭.

೩೫. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; ಪಿಎಚ್.ಡಿ. ಮಹಾಪ್ರಬಂಧ, ೨೦೦೫, ಪುಟ-೬೩.

೩೬. ಹನುಮಾಕ್ಷಿ ಗೋಗಿ; ಅನುಶಾಸನ; ಯಾದಗಿರಿ ಅಪ್ರಕಟಿತ ಶಾಸನಗಳು; ಪುಟ-೨೭೯.

೩೭. ಅದೇ, ಪುಟ-೨೮೫.

೩೮. ಎಂ.ಎಸ್.ಪಾಟೀಲ; ದಾಸೋಹ ಸ್ಮರಣ ಸಂಚಿಕೆ, ೨೦೦೧, ಪುಟ-೪೦.

೩೯. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; ಪಿಎಚ್.ಡಿ. ಮಹಾಪ್ರಬಂಧ, ೨೦೦೫, ಪುಟ-೬೫.

೪೦. ಧನವಂತ ಹಾಜವಗೋಳ; ಮುಳುಗುಂದ ನಾಡು ಒಂದು ಅಧ್ಯಯನ; ಪುಟ-೭೨.

೪೧. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೫೩.

೪೨. ಅದೇ, ಪುಟ-೫೪.

೪೩. ಧನವಂತ ಹಾಜವಗೋಳ; ಮುಳುಗುಂದ ನಾಡು ಒಂದು ಅಧ್ಯಯನ; ಪುಟ-೭೨.

೪೪. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೫೪.

೪೫. ರಮಜಾನ್ ವಿಚಾರಕ್ರಾಂತಿ; ಬಸವಣ್ಣ ಚಳುವಳಿ; ಪುಟ-೭

೪೬. ಅದೇ, ಪುಟ-೭

೪೭. ಸಿದ್ದಯ್ಯ ಕಲಾಲ; ಯಾದಗಿರಿ ದೇವಾಲಯ ಲೇಖನ; ಪುಟ-೧

೪೮. ಗವಿಸಿದ್ದಪ್ಪ ಎಚ್. ಪಾಟೀಲ; ಕುಕನೂರು ಒಂದು ಸಾಂಸ್ಕೃತಿಕ ಅಧ್ಯಯನ; ಪುಟ-೮೦.

೪೯. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; ಪಿಎಚ್.ಡಿ. ಮಹಾಪ್ರಬಂಧ, ೨೦೦೫, ಪುಟ-೭೮

೫೦. ಬಸವರಾಜ ಪೋಲಿಸ್ ಪಾಟೀಲ; ಅವರ ಲೇಖನ, ಪುಟ-೩

೫೧. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೨೯೭.

೫೨. ಡಿ.ಬಿ. ನಾಯಕ; ಕಲಬುರ್ಗಿ ಜಿಲ್ಲಾದರ್ಶನ, ೨೦೦೧. ಪುಟ-೭೦.

೫೩. ಗುಲಬರ್ಗಾ ಜಿಲ್ಲೆಯ ಗೆಜೆಟಿಯರ್; ಕರ್ನಾಟಕ ಸರ್ಕಾರ, ಪುಟ-೧.

೫೪. ಅದೇ, ಪುಟ-೯೦.

೫೫. ಅದೇ, ಪುಟ-೯೧.

೫೬. ಭೀಮರಾಯ ಲಿಂಗೇರಿ; ಯಾದಗಿರಿ ಸಾಂಸ್ಕೃತಿಕ ಅಧ್ಯಯನ; ಪಿಎಚ್.ಡಿ. ಮಹಾಪ್ರಬಂಧ, ೨೦೦೫, ಪುಟ-೭೮

## ಯಾದಗಿರಿ ಪರಿಸರದ ದೇವಾಲಯಗಳು

### ೩.೧. ದೇವಾಲಯ ವಾಸ್ತುಶಿಲ್ಪ

ಭಾರತದ ತುಂಬ ಓಡಾಡಿದ ಯಾವುದೇ ವ್ಯಕ್ತಿಗೆ ಪ್ರತಿ ಹಳ್ಳಿ ಹಳ್ಳಿಯಲ್ಲೂ ನದಿ ದಡದಲ್ಲಿ, ಬೆಟ್ಟದ ಮೇಲೆ, ಊರಿನ ಮಧ್ಯದಲ್ಲಿ, ಊರಿನ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಹೀಗೆ ಒಂದಲ್ಲಾ ಒಂದು ಕಡೆ ನಾವು ದೇವಾಲಯಗಳನ್ನು ಕಾಣಬಹುದು. ಆ ದೇವಸ್ಥಾನದಲ್ಲಿರುವ ದೇವತೆ ಗ್ರಾಮದೇವತೆಯಾಗಿರಬಹುದು ಅಥವಾ ಊರಿನ ಒಂದು ಪಂಗಡದ ಅಧಿದೇವತೆ ಯಾಗಿರಬಹುದು. ಆ ದೇವಸ್ತಾನವನ್ನು ಕಟ್ಟಿಸಿ ಪೋಷಿಸಿದವನ ಇಷ್ಟದೇವತೆಯಾಗಿರಬಹುದು. ಹೀಗಾಗಿ ದೇವತೆಗಳು ಯಾವುದಾದರೂ ಅದರ ಆರಾಧನೆಯ ಉದ್ಧೇಶದ ಹಿನ್ನೆಲೆ ಎಲ್ಲರಿಗೂ ಒಂದೇ. ಈ ಕಾರಣದಿಂದಲೇ ರಾಜರ ಅಧಿಕಾರಿಗಳ ಆಶ್ರಯದೊಂದಿಗೆ ಊರಿನ ಜನರ ಪೋಷಣೆಯಲ್ಲಿ ದೇವಸ್ಥಾನಗಳು ಬೆಳೆದುಬಂದಿವೆ.

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ಶಾಶ್ವತವಾಗಿ ನೆಲೆಯಾಗಿ ನಿಲ್ಲಬೇಕೆಂದೂ ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದೂ ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಸುತ್ತಗೋಡೆ ಅದರ ಮೇಲೆ ವಿವಿಧ ಆಕಾರದ ಮುಚ್ಚಿಗೆ ಮುಂಭಾಗದಲ್ಲಿ ಬಾಗಿಲು, ಅದರ ಮೇಲೆ ಗಾಳಿ, ಬೆಳಕು ಬರಲು ಕಮಾನೂ, ತೆರವು ಹೀಗೆ ಅವನ ಮನೆ ರೂಪಗೊಂಡಿತ್ತು. ಇದು ವಾಸ್ತು ಶಿಲ್ಪದ ಪ್ರಾಥಮಿಕ ಹೆಜ್ಜೆ. ಸುತ್ತಲಿರುವ ಪ್ರಕೃತಿಯು ತನ್ನ ಬದುಕಿನಲ್ಲಿ ಮಹತ್ತರ ಪಾತ್ರ ವಹಿಸಿರುವುದನ್ನು ಗುರುತಿಸಿದಾಗ ಮಾನವನಿಗೆ ಅದರ ಬಗ್ಗೆ ಗೌರವ ಭಯ ಭಕ್ತಿಗಳು ಮೂಡಿದವು. ಈ ದೃಷ್ಟಿಯಿಂದ ಪ್ರಕೃತಿಯ ಎಲ್ಲ ವಸ್ತುಗಳೂ ಅವನಿಗೆ ಪೂಜಾರ್ಹವಾದವು. ಈ ಕಾರಣದಿಂದಲೇ ಗಿಡ, ಮರ, ನದಿ ಇತ್ಯಾದಿಗಳು ಅವನಿಗೆ ಪೂಜನೀಯವಾದುದಲ್ಲದೆ ಪೂಜಾಸ್ಥಾನಗಳು ಆದವು. ಇನ್ನು ಮುಂದುವರೆದು ಈ ಎಲ್ಲ ಸೃಷ್ಟಿಯ ಹಿನ್ನೆಲೆಯಾಗಿ ನಿಂತು ತನ್ನನ್ನು ನಡೆಸುತ್ತಿರುವ ಯಾವುದೋ ಒಂದು ಅನಂತ ಶಕ್ತಿ ಇದೆ ಎಂಬ ಅರಿವಾದಾಗ ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದ. ಹೀಗೆ ನೀಡುವ ಆ ಬಿಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಆರಂಭಿಸಿದ ಇದು ಮುಂದೆ ದೇವಾಲಯ ರಚನೆಗೆ ನಾಂದಿಯಾಯಿತು.

ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಬೆಳೆದು ಬಂದ ದಾರಿಯನ್ನು ಗುರುತಿಸಲು ಯತ್ನಿಸಬೇಕಾಗಿದೆ. ಮೊದಲಿಗೆ ಶಾತವಾಹನರ ಕಾಲದ ಭೌದ್ಧ ಧರ್ಮದ ಚೈತ್ಯ, ಸ್ತೂಪ ವಿಹಾರಗಳು ಕಂಡುಬರುತ್ತವೆ. ಬ್ರಹ್ಮಗಿರಿ ಬನವಾಸಿ ಸನ್ನತಿ ಮುಂತಾದ ಕಡೆಗೆ ಪ್ರಾಚೀನ ವಾಸ್ತು ರಚನೆಯನ್ನು ಗಮನಿಸಬಹುದು. ಶಾಸನಗಳಿಂದ ಸ್ಪಷ್ಟವಾಗಿ ದೇವಾಲಯಗಳನ್ನು ನಿರ್ಮಿಸಿ ಪೂಜಿಸುತ್ತಿದ್ದರು ಎಂದೂ ತಿಳಿದುಬರುತ್ತದೆ."[1]

ದೇವಾಲಯಗಳ ಸ್ವರೂಪವನ್ನು ತಿಳಿದುಕೊಳ್ಳುವ ಮುನ್ನ ಅವರ ಪ್ರಧಾನ ಭಾಗ ಅಂಗಗಳನ್ನು ಸ್ಥೂಲವಾಗಿ ಮತ್ತು ಸರಳವಾಗಿ ಪರಿಚಯ ಮಾಡಿಕೊಳ್ಳುವುದು ಸೂಕ್ತ. ಇದರಿಂದ ಯಾವ ಭಾಗ ಎಲ್ಲಿ ಇರುತ್ತದೆಂದೂ ಕೆಲಮಟ್ಟಿಗಾದರೂ ತಿಳಿಯಬಹುದು. "ದೇವಾಲಯ ರಚನೆಗೆ ಎರಡು ಸೂತ್ರಗಳನ್ನು ಮುಖ್ಯವಾಗಿ ಅಳವಡಿಸಲಾಗುತ್ತವೆ. ಮಾನಸೂತ್ರ ಮತ್ತು ವಿನ್ಯಾಸ ಸೂತ್ರ"[2] ಈ ಹಿನ್ನೆಲೆಯಲ್ಲಿ ಧರ್ಮ ಕಾರ್ಯಗಳಿಗೆ ಒದಗಿರಬಹುದಾದ ಕಟ್ಟಡ ವಿನ್ಯಾಸವನ್ನು ಧಾರ್ಮಿಕ ವಾಸ್ತುಶಿಲ್ಪ ಎಂದೂ ಗುರುತಿಸಬಹುದು. ಧರ್ಮಕ್ಕೆ ವಾಸ್ತವವಾಗಿ ಇಂತಹ ವಾಸ್ತುಶಿಲ್ಪದ ಅಗತ್ಯವಿರುವುದಿಲ್ಲ. ಆದರೆ ಧಾರ್ಮಿಕ ಕಾರ್ಯಗಳನ್ನು ಆಚರಿಸುವ ಸಲುವಾಗಿ ಪ್ರತಿಯೊಂದು ಧರ್ಮದವರೂ ತಮ್ಮದೇ ಯಾದ ಕಟ್ಟಡಗಳನ್ನು ಕಟ್ಟಿಕೊಂಡಿರುತ್ತಾರೆ. ಅದು ಆ ಜನರು ದೈವ ಹಾಗೂ ಧರ್ಮದ ಬಗೆಗೆ ಮಾಹಿತಿ ನೀಡುತ್ತದೆ. ದೈವಕಲ್ಪನೆ ಪೂಜಾ ವಿಧಾನದ ತಂತ್ರ ಬೆಳೆದಂತೆಲ್ಲಾ ವಾಸ್ತುಶಿಲ್ಪವೂ ವಿಕಸಗೊಳ್ಳುತ್ತಾ ಬೆಳೆಯಿತು. ಒಂದು ಪ್ರದೇಶದ ವಾಸ್ತುಕಲೆಯ ವಾಸ್ತು ನಿರ್ಮಾಣಕ್ಕೆ ಕಾರಣ ಜನತೆಯ ಮನೋಧರ್ಮಗಳನ್ನು ಹಾಗೂ ಮನೋವಿಲಾಸಗಳನ್ನು ಪ್ರತಿಬಿಂಬಿಸುತ್ತದೆ. ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಹಿನ್ನೆಲೆಯಲ್ಲಿ ವಾಸ್ತು ನಿರ್ಮಿತಿಯ ಮೈತಳಿಯುತ್ತವೆ. ಆದ್ದರಿಂದ ಸಂಸ್ಕೃತಿಯ ಅಧ್ಯಯನದಲ್ಲಿ ವಾಸ್ತುಕಲೆಯು ಮಹತ್ವದ ಪಾತ್ರವಹಿಸುತ್ತವೆ.

ಈ ಹಿನ್ನೆಲೆಯಲ್ಲಿ ಯಾದಗಿರಿ ಪರಿಸರವನ್ನು ಪ್ರಾಚೀನ ಆಡಳಿತ ಮಾಡಿದ ಮನೇತನಗಳಾದ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು ಹಾಗೂ ಬಹುಮನಿ ಸುಲ್ತಾನರು, ಬಿಜಾಪೂರದ ಆದಿಲ್ ಶಾಹಿಳಗಳು ಮತ್ತು ಹೈದ್ರಾಬಾದಿನ ನಿಜಾಮರ ಆಡಳಿತಕ್ಕೆ ಒಳಪಟ್ಟಿರುವುದರಿಂದ ಅನೇಕ ದೇವಾಲಯಗಳು ನಿರ್ಮಾಣವಾಗಿರುವುದು ಕಂಡುಬರುತ್ತವೆ.

## ೩.೨. ಅಮೃತ ಲಿಂಗೇಶ್ವರ ದೇವಾಲಯ, ಯಾದಗಿರಿ

ಯಾದಗಿರಿ ಪರಿಸರದಲ್ಲಿ ಶ್ರೀ ರಾಘವೇಂದ್ರಸ್ವಾಮಿ ದೇವಾಲಯದ ಪಕ್ಕದಲ್ಲಿ ಅಮೃತೇಶ್ವರ ದೇವಾಲಯವಿದೆ. ನಗರದ ಖ್ಯಾತ ಬಟ್ಟೆ ವ್ಯಾಪಾರಿ ಮೋಹನ್ ಶರ್ಮಾ ಅವರಿಂದ ಪುನರ್

ನಿರ್ಮಾಣ ಹೊಂದಿದ್ದು, ಮುಖ್ಯದ್ವಾರ ಮತ್ತು ಗರ್ಭಗೃಹದ ದ್ವಾರಗಳು ಅಂದವಾದ ಕೆತ್ತನೆಯ ಕಲೆಗಳಿಂದ ತನ್ನ ಗತವೈಭವವನ್ನು ತೋರ್ಪಡಿಸಿವೆ.

**ತಳವಿನ್ಯಾಸ:** ಸುಮಾರು ೪೦ ಮತ್ತು ೮೦ ಅಡಿಗಳ ಆಯಾತಾಕಾರದ ತಳವಿನ್ಯಾಸವುಳ್ಳ ಈ ದೇವಾಲಯವು ಉತ್ತರಾಭಿಮುಖವಾಗಿದೆ. ಇದರಲ್ಲಿ ಗರ್ಭಗೃಹವು ಸುಮಾರು ೫ ಅಡಿ ಎತ್ತರದ ಜಗುಲಿಯ ಮೇಲೆ ಸುಮಾರು ೧೦ x ೧೦ ಅಡಿ ಚೌಕಾಕಾರದಲ್ಲಿ ನಿರ್ಮಿತವಾಗಿದೆ.

**ಮುಖ್ಯ ಮಹಾದ್ವಾರ:** ಉತ್ತರಾಭಿಮುಖವಾದ ಈ ದೇವಾಲಯಕ್ಕೆ ಬಂದಾಕ್ಷಣ ಅದರ ಆಧುನಿಕತೆ ನಮ್ಮನ್ನು ಗಮನ ಸೆಳೆಯುವುದಾದರೂ ಅದರ ಮುಖ್ಯದ್ವಾರದ ಕೆತ್ತನೆ ನಮ್ಮನ್ನು ಬೆರಗುಗೊಳಿಸುತ್ತದೆ. ಸುಮಾರು ೬ ಅಡಿ ಎತ್ತರವುಳ್ಳ ೩ ಸ್ತರದ ಪಟ್ಟಿಕೆಗಳಿಂದ ಕೂಡಿದ್ದು, ಇದರ ಮೇಲಿರುವ ಕೆತ್ತನೆಯ ಕಲೆ ಉತ್ಕೃಷ್ಟವಾಗಿದೆ. ಕೊನೆಯ ಪಟ್ಟಿಕೆ (ಹೊರಗಿನಿಂದ) ೬ ಇಂಚು ಅಗಲವಿದ್ದು ಕೆತ್ತನೆಯಿಂದ ಕೂಡಿದೆ. ಇದರ ೩ನೇ ಪಟ್ಟಿಕೆಗಳ ಮಧ್ಯೆ ೫ ಗಣಪತಿಯ ಮೂರ್ತಿಯ ಮತ್ತು ಇತರ ಮೂರ್ತಿಗಳನ್ನು ಸಹ ಕೆತ್ತಲಾಗಿದೆ. ಇವುಗಳಲ್ಲಿ ಮಣಿಸರಗಳು ಅತ್ಯಾಕರ್ಷಕವಾಗಿವೆ. ೨–೩ರ ಮಧ್ಯೆ ಚೌಕಾಕಾರದ ಚಿತ್ರಗಳನ್ನು ಉತ್ತಮವಾಗಿ ಕೆತ್ತಲಾಗಿದೆ. ೩ನೇ ಅಂದರೆ ಒಳಪಟ್ಟಿಕೆ ಸುಮಾರು ೧೦ ಇಂಚು ಅಗಲವಾಗಿದ್ದು ವಿವಿಧ ಕುಸುಮ ತೋರಣಗಳಿಂದ ಅಲಂಕೃತವಾಗಿವೆ.

ದ್ವಾರದ ಹಣೆಪಟ್ಟಿಕೆಯಲ್ಲಿ ಮೇಲಿನಿಂದ ಕೆಳಕ್ಕೆ ಮೊದಲನೇ ಸ್ತರದಲ್ಲಿ ಹೂವಿನ ಚಿತ್ರಗಳಿದ್ದು ನಾಲ್ಕು ಸಿಂಹದ ಮುಖಗಳ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ಅವುಗಳ ಒಳಗೆ ಸಿಂಹ, ಆನೆ, ಹೂ ಮತ್ತು ಗಿಳಿಯ ಚಿತ್ರಗಳನ್ನು ಬಿಡಿಸಲಾಗಿದೆ. ನಂತರ ಎರಡರಲ್ಲಿ ಅರ್ಧ ಕಂಬಗಳ ಬೋದುಗೆಗಳು ಇವೆ. ನಂತರ ೩ನೇ ಸ್ತರದಲ್ಲಿ ಕುಸುಮ ತೋರಣಗಳೂ ಮಧ್ಯೆ ಲಲಾಟ ಬಿಂದುವಿನಲ್ಲಿ ಗಜಲಕ್ಷ್ಮೀಯ ಉಬ್ಬು ಚಿತ್ರವಿದೆ. ಸುಮಾರು ೯ ಅಂಗುಲದ ಹೊಸ್ತಿಲ ಇಕ್ಕೆಲುಗಳಲ್ಲಿ ಸುಂದರ ದ್ವಾರಪಾಲಕರ ಒಂದೊಂದು ಕಡೆ ಮೂರರಂತೆ ಚಿತ್ರಗಳನ್ನು ಕೆತ್ತಲಾಗಿದೆ. ಕೈಯಲ್ಲಿ ತ್ರಿಶೂಲ ಮತ್ತಿತರ ಆಯುಧಗಳನ್ನು ಹಿಡಿದ ಚಿತ್ರಗಳಿವೆ."[3]

**ವಿಶಾಲ ಮಂಟಪ:** ಭಗವಂತನಿಗಾಗಿ ಸಂಗೀತವನ್ನು ಹಾಡಲು ಮತ್ತು ನೃತ್ಯವನ್ನು ಮಾಡಲೆಂದು ನಿರ್ಮಿಸಿದ್ದರಿಂದ ನೃತ್ಯ ಮಂಟಪ ಎಂದೂ ವಿಶಾಲಮಂಟಪ ಗುರುತಿಸಿದ್ದಾರೆ."[4] ದ್ವಾರ ಪ್ರವೇಶಿಸುತ್ತಿದ್ದಂತೆ ವಿಶಾಲ ಮಂಟಪ ಎಲ್ಲಾ ಗೋಡೆಗಳೂ ನೆಲಹಾಸು ಎಲ್ಲವನ್ನೂ ನವೀಕರಿಸಿರುವುದರಿಂದ ಪುರಾತನ ಲಕ್ಷಣಗಳೇನೂ ಕಾಣುವುದಿಲ್ಲ. ಮೂಲತಃ ಎತ್ತರವಿರಬಹುದಾದ ಸುಮಾರು ೫ ಅಡಿ ಜಗುಲಿಯ ಮೇಲೆ ಗರ್ಭ ಗೃಹವಿದೆ. ವಿಶಾಲ ಪ್ರದಕ್ಷಣಾ ಪಥವಿದೆ. ಅಲ್ಲದೇ ಪಶ್ಚಿಮಕ್ಕೊಂದು ಚಿಕ್ಕ ದ್ವಾರವಿದೆ. ಪೀಠದ ಪಟ್ಟಿಕೆಗಳನ್ನು ನವೀಕರಿಸುವುದರಿಂದ ಯಾವುದೂ ಕಾಣುವುದಿಲ್ಲ.

**ಗರ್ಭಗೃಹ:** ಇದರ ದ್ವಾರವು ಮುಖ್ಯದ್ವಾರ ಪಡಿ ಅಚ್ಚಿನಂತೆ ಇದ್ದು ಅದಕ್ಕಿಂತಲೂ ಸೂಕ್ಷ್ಮವಾದ ಮತ್ತು ಸೌಂದರ್ಯಯುತವಾದ ಕೆತ್ತನೆಯಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವ ಲಿಂಗವಿದೆ.

**ಶೈಲಿ:** ಅತ್ಯಂತ ಸೂಕ್ಷ್ಮ ಹಾಗೂ ಸುಂದರ ಕೆತ್ತನೆಯ ದ್ವಾರಗಳೂ ವಿಶಾಲ ಎತ್ತರದ ಪೀಠ ಪ್ರದಕ್ಷಣಾ ಪಥ ಇದೆ. ಬೆಳಗುಂದಿಯ ಬಸವಣ್ಣ ದೇವಾಲಯದ ದ್ವಾರವನ್ನು ಹೋಲುತ್ತದೆ. ಲಲಾಟ ಬಿಂದುವಿನಲ್ಲಿ ಗಜಲಕ್ಷ್ಮೀ, ಒಟ್ಟಿನಲ್ಲಿ ಕಲ್ಯಾಣ ಚಾಲುಕ್ಯರ ಶೈಲಿಯ ಕೊನೆಯ ಹಂತದ ದೇವಾಲಯವಿದೆ.

**ಕಾಲ:** ಬೆಳಗುಂದಿಯ ದೇವಾಲಯದ ದ್ವಾರಗಳನ್ನು ಹೋಲುವುದರಿಂದ ಅದಕ್ಕಿಂತಲೂ ಉತ್ಕೃಷ್ಟವಾದ ಕುಸರಿ ಕೆಲಸ ಈ ದ್ವಾರದಲ್ಲಿ ಆಗಿರುವುದರಿಂದ ಬೆಳಗುಂದಿಯ ದೇವಾಲಯದ ನಂತರ ನಿರ್ಮಾಣವಾಗಿದೆ ಎಂದೂ ತಿಳಿದುಬರುತ್ತದೆ. ಕಲ್ಯಾಣಿ ಚಾಲುಕ್ಯರ ದ್ರಾವಿಡ ಶೈಲಿಯ ಈ ದೇವಾಲಯದಲ್ಲಿ ಕಂಡುಬರುವುದರಿಂದ ಕ್ರಿ.ಶ. ೧೧ ರಿಂದ ೧೨ನೆಯ ಮಾನದಲ್ಲಿ ನಿರ್ಮಿತವಾಗಿರಬೇಕೆಂದು ತಿಳಿದುಬರುತ್ತದೆ.

**ಧರ್ಮ:** ಗರ್ಭಗೃಹದಲ್ಲಿ ಲಿಂಗ ಲಲಾಟ ಬಿಂದುವಿನಲ್ಲಿ ಗಜಲಕ್ಷ್ಮೀ ದ್ವಾರಗಳಲ್ಲಿ ಗಣಪತಿ ಮುಂತಾದ ಚಿತ್ರಗಳಿರುವುದರಿಂದ ಶೈವ ಸಂಪ್ರದಾಯದ ದೇವಾಲಯವಾಗಿದೆ.

**ಜೈನ ಬಸದಿ ಯಾದಗಿರಿ:** "ಕಾಲಗರ್ಭದಲ್ಲಿ ಮುಳುಗಿ ಮಸುಕಾದ ಇತಿಹಾಸವನ್ನು ಅಳಿದುಳಿದ ಸ್ಮಾರಕಗಳು ಗತಕಾಲದ ವೈಭವವನ್ನು ಸಾರಿಹೇಳುತ್ತವೆ. ಅಂತಹುಗಳಲ್ಲಿ ಒಂದಾಗಿರುವ ಯಾದಗಿರಿ ಪರಿಸರವು ಹಾಗೂ ಸಮೀಪದಲ್ಲಿನ ಉಬ್ಬು ಚಿತ್ರಗಳು ಬಸದಿಗಳು ಒಂದು ಕಾಲಕ್ಕೆ ಜೈನ ಧರ್ಮದ ನೆಲವೀಡಾಗಿರುವುದು ಕಂಡುಬರುತ್ತದೆ"[38] ಯಾದಗಿರಿಯ ಪರಿಸರದ ಚನ್ನಪ್ಪನ ಬೆಟ್ಟ ಪೂರ್ವಕ್ಕೆ ೨ ಕಿ.ಮೀ. ದೂರದಲ್ಲಿರುವ ಬೆಟ್ಟದ ಸಾಲುಗಳಲ್ಲಿರುವುದನ್ನು ಜಿನ್ನಪ್ಪನ ಬೆಟ್ಟ ದಿನ್ನಪ್ಪ ಬೆಟ್ಟ ಎಂಬ ಹೆಸರಿನಿಂದ ಕರೆಯಲ್ಪಡುವ ಬೆಟ್ಟದಲ್ಲಿ ಸುಮಾರು ೧೫೦ ಮೀ. ಎತ್ತರದ ಹೆಬ್ಬಂಡೆಯಲ್ಲಿ ದೊಡ್ಡ ಬಸದಿ ಇದ್ದು, ಇದು ನೆಲದಿಂದ ಸುಮಾರು ೧೫೦ ಮೆಟ್ಟಿಲುಗಳನ್ನು ಹತ್ತಬೇಕು. ಮೆಟ್ಟಿಲುಗಳ ಇಕ್ಕೆಲುಗಳಲ್ಲಿ ೪ ಅಡಿ ಎತ್ತರದ ರಕ್ಷಣಾ ಗೋಡೆಯಿದೆ. ಈ ಬಸದಿಯು ಸುಮಾರು ೨೪ ಅಡಿ ಉದ್ದ, ೧೫ ಅಡಿ ಅಗಲ, ೧೨ ರಿಂದ ೧೫ ಅಡಿ ಎತ್ತರವಿದೆ. ಗುಹಾಂತರ ಬಸದಿಯ ಉತ್ತರ ಮತ್ತು ದಕ್ಷಿಣಕ್ಕೂ ಎರಡು ಕೋಣೆಗಳಿದ್ದು ಅವೆರಡರಿಂದಲೂ ಹೋಗಲು ಬೇರೆ ಬೇರೆ ದ್ವಾರಗಳಿವೆ.

ಬಸದಿಯ ಒಳ ಬೆನ್ನಗೋಡೆಯ ಹೆಬ್ಬಂಡೆಯ ಮೇಲೆ ಜೈನ ಮೂರ್ತಿಗಳ ಕೆತ್ತನೆಯಿದೆ. ಪದ್ಮಾಸನದಲ್ಲಿ ಕುಳಿತ ದೊಡ್ಡ ಮೂರ್ತಿಯ ಪಕ್ಕದಲ್ಲಿ ಕ್ರಮವಾಗಿ ೩ ಸಣ್ಣ ಮೂರ್ತಿಗಳನ್ನು

ಒಂದರ ಮೇಲೊಂದರಂತೆ ಕೆತ್ತಲಾಗಿದೆ. ಎಲ್ಲವುಗಳು ಒಂದೇ ಚೌಕಟ್ಟಿನಲ್ಲಿರುವಂತೆ ಕೆತ್ತಲಾಗಿದೆ. ಒಟ್ಟು ಸಾಲು ಬ್ರಂಜಿಕೆಯಲ್ಲಿ ೨೯ ಜೈನ (ತೀರ್ಥಂಕರ)ರ ಮೂರ್ತಿಗಳಿವೆ. ಬಸದಿಯ ಎಡಭಾಗದಲ್ಲಿ ೩ ಅಡಿ ಎತ್ತರದ ಕಲ್ಲಿನ ಚೌಕದಲ್ಲಿ ಸುಂದರವಾದ ಪದ್ಮಾವತಿಯನ್ನು ಕೆತ್ತಲಾಗಿದೆ.

**ಟೀಕಾಚಾರ್ಯ ದೇವಾಲಯ, ಯರಗೋಳ**

ಯಾದಗಿರಿ ಪರಿಸರದಿಂದ ಉತ್ತರಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಯರಗೋಳ ಎಂಬ ಗ್ರಾಮದಲ್ಲಿ ಊರಿನ ಮಧ್ಯದಲ್ಲಿರುವ ಪ್ರಾಚೀನ ಕಾಲದ ೩ನೆಯ ಜಯಸಿಂಹನ ಕಾಲದಲ್ಲಿ ನಿರ್ಮಿಸಿರುವ ಟೀಕಾಚಾರ್ಯ ದೇವಾಲಯವು ವಿಶಿಷ್ಟವಾಗಿದೆ. ಒಂದು ಕಾಲಕ್ಕೆ ಅವು ಸಂಪೂರ್ಣವಾಗಿ ಮಣ್ಣಿನಿಂದ ಮುಚ್ಚಲ್ಪಟ್ಟಿದ್ದವೆಂದು ನಂತರ ಅವನು ತೆಗೆಯಲಾಗಿದೆಯೆಂದು ಹೇಳುತ್ತಾರೆ. ಈ ಸಂಕೀರ್ಣದಲ್ಲಿ ಸಧ್ಯದಲ್ಲಿ ಎರಡು ಗುಡಿಗಳಿದ್ದು ಇನ್ನೊಂದು ಸಂಪೂರ್ಣವಾಗಿ ನಾಶಹೊಂದಿ ಅವರ ತಳಪಾಯ ಮಾತ್ರ ಅವಶೇಷವಾಗಿದೆ.

**ತಳವಿನ್ಯಾಸ:** ಗುಡಿಯ ಪೀಠಗಳು ಸಂಪೂರ್ಣವಾಗಿ ಮುಚ್ಚಲ್ಪಟ್ಟಿರುವುದರಿಂದ ಅವರ ತಳವಿನ್ಯಾಸವು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಮಧ್ಯದ ಗುಡಿಯ ಮಗ್ಗಲಲ್ಲಿ ಕಾಣುವ ಗರ್ಭಗೃಹವು ಪೀಠದ ಕೆಳಭಾಗಗಳಿಂದ ಪೀಠವು ಬಹುಕೋನಾಕೃತಿಯ ತಲವಿನ್ಯಾಸ ಹೊಂದಿದ್ದುದಾಗಿದೆ. ಇನ್ನೊಂದು ಸಂಪೂರ್ಣವಾಗಿ ಹಾಳಾದ ಬಲಭಾಗದ ದೇವಾಲಯದ ಪೀಠದ ಪಟ್ಟಿಕೆಗಳು ಕಾಣುತ್ತಿರುವುದರಿಂದ ತಲವಿನ್ಯಾಸವು ಬಹುಕೋನಾಕೃತಿಯಿದ್ದು ಗರ್ಭಗೃಹ ಮತ್ತು ಮುಖ ಮಂಟಪಗಳು ಚೌಕಾಕೃತಿಯಲ್ಲಿರುವುದು ಕಂಡುಬರುತ್ತವೆ. 

**ಮೊದಲನೆಯ ದೇವಾಲಯ:** ಸಂಕೀರ್ಣದ ಮೊದಲನೆ ದೇವಾಲಯದ ಪೂರ್ವಾಭಿಮುಖವಾದ ಮುಖ ಮಂಟಪ ಗರ್ಭಗೃಹವನ್ನು ಹೊಂದಿದೆ. ಮುಖಮಂಟಪದ ಸ್ವಲ್ಪ ತಗ್ಗಿನಲ್ಲಿಯೇ ಯಾವುದೇ ದ್ವಾರವಿಲ್ಲದೆ ತೆರೆದುದಾಗಿದೆ. ಇದರ ಎಡಬದಿಯ ಗೋಡೆಯ ಮಧ್ಯ ಕರಿಕಲ್ಲಿನ ಸುಂದರ ನುಣುಪಾಗಿ ಕೆತ್ತಲ್ಪಟ್ಟ ಶಿವ ಮತ್ತು ಗಣಪತಿಯನ್ನೊಳಗೊಂಡ ಸಪ್ತ ಮಾತೃಕೆಯರ ಮೂರ್ತಿಗಳು ಬಹಳ ಆಕರ್ಷಕವಾಗಿದೆ.

ಅದನ್ನು ಚಿಕ್ಕ ಮಂಟಪಕೃತಿಯ ಒಳಗೆ ನಿಲ್ಲಿಸಲಾಗಿದೆ. ಅದರ ಮೇಲೆ ಕಲ್ಲಿನಿಂದ ಚಾಚಿದ ಛಾವಣಿಯಂತೆ ಮಾಡಲಾಗಿದೆ. ಆ ಮೂರ್ತಿಗಳು ಎಡದಿಂದ ಬಲಕ್ಕೆ ಶಿವ ಕೈಯಲ್ಲಿ ಖಡ್ಗ ಇನ್ನೊಂದು ಕೈಯಲ್ಲಿ ಶಂಖ ಅದರ ಕೆಳಗೆ ವಾಹನ ನಂದಿ ಇದೆ.

**ಗರ್ಭಗೃಹ:** ಮೂರು ಪಟ್ಟಿಕೆಗಳಿಂದ ಕೂಡಿದ ಅಷ್ಟೇನು ಸುಂದರ ಕೆತ್ತನೆಯಿಲ್ಲದ ಗರ್ಭಗೃಹವು ದ್ವಾರದ ಬಿಂದುವಿನಲ್ಲಿ ಗಜಲಕ್ಷ್ಮಿಯ ಚಿತ್ರ ದ್ವಾರಪಾಲಕ ಮದನಿಕೆಯ ಚಿತ್ರಗಳು ಹೊಸ್ತಿಲಿನ ಮೇಲ್ಭಾಗದಲ್ಲಿ ಕಾಣುತ್ತೇವೆ.

ಚೌಕಾಕಾರದ ಗರ್ಭಗೃಹದ ಪೀಠದಲ್ಲಿ ಪಾಣಿಪಟ್ಟಿಯಲ್ಲಿ ಲಿಂಗವಿದ್ದು ತೊಳೆದ ನೀರು ಹೊರಗೆ ಹೋಗಲು ದಾರಿ ಇದೆ. ಅದರ ಹಿಂದೆ ಕೈಯಲ್ಲಿ ಡಮರುಗ ಹಿಡಿದು ನಿಂತ ಶಿವ ಪಾರ್ವತಿಯರ (ಜೋಡಿ) ಕೆತ್ತನೆಯ ಮೂರ್ತಿ ಅತೀ ಸುಂದರವಾಗಿದೆ. ಅದರ ಕೆಳಗಡೆ ಎಡದಲ್ಲಿ ಗಣಪತಿ ಬಲದಲ್ಲಿ ನಂದಿಯು ಮೂರ್ತಿ ಕೆತ್ತಲಾಗಿದೆ. ಸುಂದರ ಮೂರು ವೃತ್ತದೊಳಗೆ ಕಮಲದಂತೆ ಕೆತ್ತನೆಯ ಭುವನೇಶ್ವರಿ ಇವೆ. ಭಗ್ನಗೊಂಡ ಕರಿಕಲ್ಲಿನ ನಂದಿಯಿದ್ದು ಎಡಕ್ಕೆ ಸುಂದರ ಮೂರು ಅಡಿ ಉದ್ದ ಗಣಪತಿ, ವಿಷ್ಣು, ಲಕ್ಷ್ಮೀಯರ ಮೂರ್ತಿಗಳು ತುಂಬಾ ಸುಂದರ ಕೆತ್ತನೆಯ ಪ್ರತೀಕವಾಗಿದೆ.

ಈ ದೇವಾಲಯಕ್ಕೆ ಹೊಂದಿಕೊಂಡಂತೆ ಎಡಭಾಗಕ್ಕೆ ಉತ್ತರಾಭಿಮುಖವಾಗಿ ಇನ್ನೊಂದು ದೇವಾಲಯವಿದೆ. ಮೊದಲನೆ ಗುಡಿಯ ತೆರನಾದ ತಳವಿನ್ಯಾಸವಿರಬಹುದಾದರೂ ಸಂಪೂರ್ಣವಾಗಿ ಮುಚ್ಚಿವೆ. ಗರ್ಭಗೃಹ ಮತ್ತು ಮುಖಮಂಟಪಗಳು ಮೊದಲನೆಯ ದೇವಾಲಯದ ಅದರ ಬಲಭಾಗದ ಪಕ್ಕದಲ್ಲಿ ಹೊರಗೋಡೆಯ ಮೇಲೆ ಸಾಲು ಮೂರ್ತಿಗಳಿವೆ. ಅಲ್ಲದೆ ಅಲ್ಲೇ ಭಗ್ನವಾದ ಸ್ತ್ರೀ ಪುರುಷರ ಹಾಗೂ ವಿಷ್ಣು ಲಕ್ಷ್ಮೀಯರ ಜೊತೆಯಾಗಿರುವ ಮೇಲೆ ಸರ್ಪವಿರುವ ಕೆತ್ತನೆಯ ಭಾಗಗಳು ಹೊರಗಡೆ ಕಾಣುತ್ತೇವೆ. ಈ ದೇವಾಲಯಕ್ಕೆ ಅಭಿಮುಖದಲ್ಲಿ ಇಂತಹದೇ ತಳವಿನ್ಯಾಸವುಳ್ಳ ದೇವಾಲಯವಿದೆ. ಸಂಪೂರ್ಣವಾಗಿ ಬಿದ್ದುಹೋಗಿದೆ. ಗೋಪುರಗಳು ಹಾಳಾಗಿವೆ.

**ಶೈಲಿ:** ಎತ್ತರವಲ್ಲದ ಪೀಠ ಮತ್ತು ತಗ್ಗಿನಲ್ಲಿರುವ ಮುಕ್ತಿಮಂಟಪ ಅಷ್ಟೇನೂ ಅಲಂಕೃತವಲ್ಲದ ದ್ವಾರಗಳು ಮತ್ತು ಬಳಸಿದ ಕಲ್ಲು ಮುಂತಾದವುಗಳಿಂದ ರಾಷ್ಟ್ರಕೂಟರ ಕೊನೆಯಲ್ಲಿ ಅಥವಾ ಕಲ್ಯಾಣಿ ಚಾಲುಕ್ಯರ ಆರಂಭದ ಶೈಲಿಯ ದೇವಾಲಯ ತ್ರಿಕೂಟಗಳ ರಚನೆಯ ಕಲ್ಪನೆಯಾಗಿ ಈ ಸಂಕೀರ್ಣದ ತಳವಿನ್ಯಾಸ ವಾಸ್ತುಶಿಲ್ಪವು ಇರಬಹುದೆಂದು ಊಹಿಸಲಾಗಿದೆ.

**ಕಾಲ:** ಈ ಮೊದಲು ಹೇಳಿದಂತೆ ಆರಂಭದ ದೇವಾಲಯಗಳ ಶೈಲಿ ಪ್ರಾಥಮಿಕ ಹಂತ ಕಲ್ಯಾಣಿ ಚಾಲುಕ್ಯರ ಶೈಲಿಯಾಗಿದ್ದರಿಂದ ಇದನ್ನು ಸುಮಾರು ೯ ರಿಂದ ೧೦ನೆಯ ಶತಮಾನದ ಮಧ್ಯ ನಿರ್ಮಾಣವಾಗಿರಬಹುದು. ಇವಲ್ಲದೆ, ರಾಷ್ಟ್ರಕೂಟರ ಕಾಲಕ್ಕೆ ನಿರ್ಮಾಣ ಹೊಂದಿ ನಂತರದಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೂ ಪುನರುಜ್ಜೀವನ ಹೊಂದಿರಬಹುದೆಂದು ತಿಳಿದುಬರುತ್ತದೆ.

**ಧರ್ಮ:** ಗರ್ಭಗೃಹದಲ್ಲಿ ಲಿಂಗ, ಶಿವ, ಪಾರ್ವತಿ, ಗಣಪತಿಯರ ಮೂರ್ತಿಗಳು ಮತ್ತು ಗಜಲಕ್ಷ್ಮೀ ಸಪ್ತ ಮಾತೃಕೆಯರ ಮತ್ತು ಹೊರಗಡೆ ನಂದಿ ಮುಂತಾದವುಗಳಿರುವುದರಿಂದ ಇದು ಶೈವ ಸಂಪ್ರದಾಯಕ್ಕೆ ಸೇರಿರಬಹುದಾದರೂ ವಿಷ್ಣು ಲಕ್ಷ್ಮೀಯರ ಮೂರ್ತಿಗಳು ಭಗ್ನವಾಗಿರುವುದರಿಂದ ಇದು ತೀವ್ರ ವಿನಾಶಕ್ಕೆ ಒಳಪಟ್ಟದಾಗಿದೆ.

**ಮೈಲಾರ ಲಿಂಗೇಶ್ವರ ದೇವಾಲಯ:** ಕರ್ನಾಟಕದ ಧಾರ್ಮಿಕ ದೇವಾಲಯಗಳಲ್ಲಿ ಒಂದಾಗಿರುವ ಮೈಲಾರಲಿಂಗೇಶ್ವರ ದೇವಾಲಯವು ಯಾದಗಿರಿ ಪರಿಸರದಿಂದ ಪೂರ್ವಕ್ಕೆ ೧೭ ಕಿ.ಮೀ. ದೂರದ ಚಿಕ್ಕ ಊರು. ಮೈಲಾಪೂರ ಬೆಟ್ಟದ ಮೇಲಿರುವ ನೈಸರ್ಗಿಕ ಗುಹಾಲಯಗಳಲ್ಲಿ ಪ್ರಮುಖ ದೇವತೆ ಮೈಲಾರಲಿಂಗ ಅಥವಾ ಮಲ್ಲಯ್ಯ ಎಂಬ ದೇವತೆಯಿಂದ ಈ ಗ್ರಾಮಕ್ಕೆ ಮೈಲಾಪೂರ ಎಂದೂ ಹೆಸರು ಬಂದಿದೆ.

ಬೆಟ್ಟಕ್ಕೆ ದಕ್ಷಿಣ ದಿಕ್ಕಿನಿಂದಿರುವ ವಿಶಾಲವಾದ (ಪುನರ್ ನಿರ್ಮಾಣ) ಮೆಟ್ಟಿಲುಗಳಿಂದ ಅಭಿಮುಖವಾಗಿ ಹತ್ತುವಾಗ ಆರಂಭದಲ್ಲಿ ಎಡಗಡೆ ಎರಡು ಮೂರ್ತಿಗಳ ಮಂಟಪವಿದೆ. ಬಲಗಡೆ ಚಿಕ್ಕ ಗಾತ್ರದ ವೀರಗಲ್ಲು ಮತ್ತು ಮಾಸ್ತಿ ಕಲ್ಲುಗಳನ್ನು ಅಲ್ಲಲ್ಲಿ ಇರುವುದನ್ನು ಕಾಣುತ್ತೇವೆ. ತಪ್ಪಾಗಿ ಜನರು ಅವುಗಳನ್ನು ಗ್ರಹಿಸಿ ಮೆಸ್ತಮ್ಮ ದೇವರೆಂದು ಕರೆಯುತ್ತಾರೆ. ಎಡಗಡೆ ಬಂಡೆಯ ಮೇಲೆ ತ್ರಿಶೂಲಾಕಾರದ ಚಿಹ್ನೆಯನ್ನು ಸ್ಪಷ್ಟವಾಗಿ ಕೆತ್ತಲಾಗಿದೆ. ದಕ್ಷಿಣಾಭಿಮುಖವಾಗಿ ಇರುವ ಮಹಾದ್ವಾರಕ್ಕೆ ಗೋಪುರವಿರುದಿಲ್ಲ. ಬಲಗಡೆ ಇಕ್ಕೆಲಗಳಲ್ಲಿ ವಿಶಾಲವಾದ ಕಟ್ಟೆಗಳಿವೆ. ಅವುಗಳಲ್ಲಿ ಮೂರು ಮೂರು ಕಂಬಗಳಿವೆ. ಬಹುಕೋನಾಕೃತಿಯಲ್ಲಿ ಸುಂದರವಾಗಿ ಕೆತ್ತಲ್ಪಟ್ಟಿವೆ. ಆ ಕಂಬದೊಳಗೆ ಚಿಕ್ಕ ಚಿಕ್ಕ ಕಂಬಗಳ ಕಲ್ಪನೆ ಮೂಡಿಬಂದಿರುವುದೊಂದು ವೈಶಿಷ್ಟ್ಯ ಗದ್ದುಗೆಕಲ್ಲು ಕರಿಯ ಕಗ್ಗಲಾಗಿದ್ದು, ಕುಸುರಿ ಕೆಲಸದಿಂದ ಆಕರ್ಷಿಸಲ್ಪಡುತ್ತದೆ.

**ತುರಂಗಿ ಬಾಲಮ್ಮನ ಗುಹೆ:** ಮಹಾದ್ವಾರ ದಾಟಿ ಮುಂದೆ ಎಡಕ್ಕೆ ತಿರುಗಿದರೆ ಎದುರಿಗೆ ಕಾಣುವುದೇ ತುರಂಗಿ ಬಾಲಮ್ಮನ ಗುಹೆ–ಗುಹೆಗೆ (೫ ಅಡಿ ಎತ್ತರವಿರುವ ಈ ಜಗುಲಿಯ ಸುತ್ತಲೂ ನಾಲ್ಕು ತಳಪಟ್ಟಿಗಳಿಂದ) ಅಲಂಕೃತವಾಗಿದೆ. ಅವುಗಳಲ್ಲಿ ಗಂಢಬೇರುಂಢ, ಆನೆ, ಅಶ್ವಮೇಧನ ಕುದುರೆ ಮುಂತಾದ ಅನೇಕ ಪ್ರಾಣಿಗಳ ಸುಂದರ ಕೆತ್ತನೆಯನ್ನು ಕಾಣುತ್ತೇವೆ. ಪೂರ್ವ ಮತ್ತು ದಕ್ಷಿಣಕ್ಕಿರುವ ಎರಡು ದ್ವಾರದ ಮೆಟ್ಟಿಲುಗಳಿಗೆ ಪಕ್ಕದಲ್ಲಿ ಸುಂದರಿ ಆನೆಗಳನ್ನು ನಿಲ್ಲಿಸಲಾಗಿದೆ. ಜಗುಲಿಯ ಮೇಲೆ ಗುಹೆಗೆ ಹೊಂದಿಕೊಂಡಂತೆ ಪೂರ್ವ ಮತ್ತು ಪಶ್ಚಿಮಕ್ಕೆ ಎರಡು ಅರ್ಧ ಕಂಬಗಳಿದ್ದು ಮುಂದೆ ಅದೇ ನೇರಕ್ಕೆ ಜಗಲಿ ಮೇಲೆ ಎರಡು ಕೊನೆಯಲ್ಲಿ ಕಂಬಗಳನ್ನು ನಿಲ್ಲಿಸಲು ಮಾಡಿದ ಸ್ಥಾನ ಗುರುತಿಸಬಹುದಾಗಿದೆ. ಆದರೆ ಇನ್ನುಳಿದ ಯಾವುದೇ ಕಂಬಗಳಲ್ಲಿ ಕಂಬಗಳ ಗುರುತಾಗಲಿ ಕಾಣುವುದಿಲ್ಲ. ಆದುದರಿಂದ ಈ ಗುಹೆಯಿಂದ ಹೊರಗೆ ನಿರ್ಮಿಸಿದ ಜಗಲಿ ಮೇಲೆ ನಿರ್ಮಿಸಬೇಕಾಗಿದ್ದ ದೇವಾಲಯದ ಭಂಗ ಆರಂಭ ಹಂತದಲ್ಲಿ ಭಗ್ನವಾಗಿದ್ದುದು ಅದರ ಪ್ರಾಥಮಿಕ ಅಂಶಗಳಿಂದ ತಿಳಿದುಬರುತ್ತವೆ. ಮುಂದುಗಡೆ ಅಲ್ಲಲ್ಲಿ ಬಿದ್ದ ಗದ್ದುಗೆ ಕಲ್ಲುಗಳಲ್ಲಿ ಸರಪಳಿ ಕುಮುದೆದ ಕೆತ್ತನೆ ಅತ್ಯಾಕರ್ಷಕ ಸುಂದರ ಕಂಬಗಳು

ವಿನಾಶದ ಕಥೆಯನ್ನು ಹೇಳುತ್ತವೆ. ಇಳಿದು ಪೂರ್ವಕ್ಕೆ ಬಂದರೆ ಚಿಕ್ಕ ಮಂದಿರದಲ್ಲಿ ಮಹೇಶ್ವರಿಯ ಮೂರ್ತಿ ಇವೆ. ಕುಳಿತ ಭಂಗಿಯಲ್ಲಿ ತ್ರಿಶೂಲ ಖಡ್ಗವಿದ್ದು, ಕೆಳಗಡೆ ರಾಕ್ಷಸನ ಮೂರ್ತಿ ಇದೆ.

**ಹೆಗ್ಗಣ ಪ್ರಧಾನ ಗುಡಿ:** ತುರಂಗಿ ಬಾಲಮ್ಮನ ದೇವಾಲಯಕ್ಕೆ ಹೊಂದಿಕೊಂಡಂತೆ ಪೂರ್ವಾಭಿಮುಖವಾಗಿ ಇರುವ ಈ ದೇವಾಲಯವು ಕಲೆಯ ದೃಷ್ಟಿಯಿಂದಲೂ ತುಂಬಾ ಉತ್ಕೃಷ್ಟವಾಗಿದೆ. ಆಯತಾಕಾರದ ತಳವಿನ್ಯಾಸವುಳ್ಳ ಈ ದೇವಾಲಯ ಎರಡು ಹಂತದಲ್ಲಿ ನಿರ್ಮಿತವಾಗಿದೆ. ಮುಖ ಮಂಟಪ ಸುಮಾರು ನಾಲ್ಕು ಅಡಿ ಎತ್ತರದ ಪೀಠದ ಮೇಲೆ ಹೊಂದಿದ್ದು, ಮುಂದಿನ ನಾಲ್ಕು ಕಂಬಗಳು ನಿರ್ಮಿತವಾಗಿವೆ. ಪೀಠದ ಅಲಂಕಾರಕ್ಕೆ ಆನೆ, ಹಂಸ, ಹೂ ಅಶ್ವಮೇಧದ ಕುದುರೆ ಅಲ್ಲದೆ ನಾಲ್ಕು ತಲೆಯುಳ್ಳ ಒಂದೆ ದೇಹದ ಪ್ರಾಣಿ ಮುಂದೆ, ಮೂರು ಕಾಲು ಎರಡು ತಲೆಗಳ ವಿಚಿತ್ರ, ಪ್ರಾಣಿಗಳ ಕೆತ್ತನೆಗಳಿವೆ. ಮುಖ ಮಂಟಪದ ನಾಲ್ಕು ಕಂಬಗಳು ಹಂತಹಂತವಾಗಿ ವೃತಚೌಕಾಕಾರದಲ್ಲಿವೆ. ಕಂಬಗಳು ಅಪೂರ್ಣವಾಗಿವೆ. ಕಂಬಗಳ ಕೆತ್ತನೆಯ ಸೂಕ್ಷ್ಮತೆ ಮತ್ತೆಲ್ಲೂ ಕಾಣಸಿಗದು. ಕಂಬದ ಮೇಲೆ ಚಾತು ಪೀಠಗಳನ್ನೊಳಗೊಂಡು ಇಳಿಜಾರು ಛಾವಣಿ ಇದೆ. ಎರಡು ದ್ವಾರಗಳನ್ನೊಳಗೊಂಡ ಈ ದೇವಾಲಯದ ಪೂರ್ವಕ್ಕೆ ಇರುವ ದ್ವಾರವೇ ಪ್ರಮುಖವಾದುದು. ಇದರ ಒಳಗಡೆ ಯಾವುದೇ ಕಲೆಗಳು ಇರುವುದಿಲ್ಲ. ಉತ್ತರಕ್ಕಿರುವ ದ್ವಾರದ ಮೂಲಕ ಹೊರ ಬಂದಾಗ ಪ್ರಾಂಗಣದಲ್ಲಿ ಅಷ್ಟೇನು ಸುಂದರವಲ್ಲದ ನಾಲ್ಕು ಕಂಬಗಳಿವೆ. ಇದರ ವಾಸ್ತುಶಿಲ್ಪ ಮೂಲ ಮುಖ ಮಂಟಪದಿಂದ ವ್ಯತ್ಯಾಸ ಹೊಂದಿದೆ. ಆದ್ದರಿಂದಲೇ ಇದು ನಂತರದಲ್ಲಿ ಆಗಿರಬೇಕೆಂದು ಊಹಿಸಲಾಗಿದೆ. ಈ ದೇವಾಲಯದ ಮುಂದಿನ ಕಲ್ಲು ನೆಲ ಹಾಸಿನಲ್ಲಿ ಕಲ್ಲಿನ ತಟ್ಟೆಗಳ ಸಾಲುಗಳಿವೆ.

**ಮಾಳಮ್ಮನ ಗುಹೆ:** ಹೆಗ್ಗಣ ಪ್ರಧಾನ ದೇವಾಲಯದ ಎದುರಿನಲ್ಲಿ ಪಶ್ಚಿಮಾಭಿಮುಖವಾಗಿ ಸಿಗುವ ನೆಲಮಾಳಿಗೆಯ ಗುಹೆಯು ಸುಮಾರು ೧೦ ಅಡಿ ಒಳಗೆ ಇಳಿಯಬೇಕು. ಚಿಕ್ಕದಾದ ಮುಖದ್ವಾರವನ್ನು ಹೊಂದಿದ್ದು ಕತ್ತಲೆ ತುಂಬಿದೆ. ಈ ಗುಹೆಯ ಕಲ್ಲಿನಲ್ಲಿ ಯಾವುದೇ ಕೆತ್ತನೆಯಾಗಲೀ ಕಾಣಿಸುವುದಿಲ್ಲ. ಈ ಗುಹೆಯ ಎದೂರಿನ ಚೌಕಾಕಾರದ ಹಾಸುಗಲ್ಲಿನ ಮೇಲೆ ಲಿಪಿಗಳಿವೆ. ಬಹುಶಃ ನೂತನವಾಗಿ ದೇವನಗರಿ ಲಿಪಿ ಎಂಬುದಾಗಿ ತಿಳಿದುಬರುವುದು ಶಾಸನದ ಕಟ್ಟೆಯಾಗಿರುವ ಅದು ಆಡು ಭಾಷೆಯಲ್ಲಿ ಶಾಸಿ ಎಂದೂ ಜನರು ಕರೆಯುತ್ತಾರೆ.

**ಮಲ್ಲಯ್ಯನ ಗುಹೆ:** ಗಿಂಗಿ ಮಾಳಮ್ಮನ ಗುಹೆ ಎದುರು ಬಲಭಾಗಕ್ಕೆ ಸ್ವಲ್ಪ ಎತ್ತರದ ಬಂಡೆ ಆ ಬಂಡೆಯ ಪೂರ್ವಕ್ಕೆ ಹಾಗೂ ಪಶ್ಚಿಮದ ಕೊನೆಯಲ್ಲಿ ಎರಡು ಉತ್ತರಾಭಿಮುಖ ದ್ವಾರಗಳಿಂದ ಗುಹೆಗೆ ಪ್ರವೇಶಿಸಬಹುದಾಗಿದೆ. ಪೂರ್ವದ ಕಡೆಯ ಗಜಲಕ್ಷ್ಮಿಯ ಚಿತ್ರವಿರುವುದು

ವೈಶಿಷ್ಟವಾಗಿದೆ. ಪಶ್ಚಿಮದ ಕೊನೆಯ ದ್ವಾರ ಮುಖ್ಯವಾಗಿದೆ. ಕೃತಕ ಅನೇಕ ಅಲಂಕಾರಗಳಿಂದಾಗಿ ದ್ವಾರದ ಮೂಲಕ್ಕೆ ಧಕ್ಕೆಯಾದರೂ ನೋಡಲು ಸುಂದರವಾಗಿದೆ. ಮೂರ್ತಿ ಎಡಗಡೆ ಸುರಂಗ ಮಾರ್ಗವಿದ್ದು ಅದು ತುರಂಗಿ ಬಾಲಮ್ಮನ ಗುಹೆಗೆ ಹೋಗುವುದೆಂದು ಹೇಳುತ್ತಾರೆ.

**ತಳವಿನ್ಯಾಸ ಶೈಲಿ:** ಪ್ರಕೃತಿ ಗುಹೆಗಳ ಮುಂದೆ ಆಯಾತಾಕಾರದ ತಳವಿನ್ಯಾಸದ ದೇವಾಲಯಗಳನ್ನು ನಿರ್ಮಿಸಲಾಗಿದೆ. ಎತ್ತರದ ಪೀಠದ ಮೇಲೆ ತುರಂಗಿ ಬಾಲಮ್ಮನ ಗುಹೆ ಮುಂದಿನ ಮುಖ ಮಂಟಪವು ಆರಂಭದ ಹಂತದಲ್ಲಿಯೇ ನಾಶವಾದ ಅವಶೇಷಗಳಿಂದ ಮತ್ತು ತಳಪಟ್ಟಿಗಳ ಮೇಲೆ ವಿವಿಧ ಆಕೃತಿಗಳನ್ನು ಕೆತ್ತಲಾಗಿದ್ದು ವಿಶೇಷವಾಗಿ ರಾಷ್ಟ್ರಕೂಟರ ಗುಹಾಂತರ ದೇವಾಲಯಗಳ ಶೈಲಿಯಲ್ಲಿ ಇವುಗಳನ್ನು ನಿರ್ಮಿಸಲು ಹೋಲುವಂತಿದ್ದರೂ ಗುಹೆಗಳಲ್ಲಿ ಯಾವುದೇ ಕೆತ್ತನೆಯ ಕಾರ್ಯವಿಲ್ಲದಿರುವುದು ವಿಶೇಷ ನೈಸರ್ಗಿಕ ಗುಹೆಗೆ ಮುಂದಿನ ಮುಖ ಮಂಟಪದಂತೆ ಮಾತ್ರ ನಿರ್ಮಿಸಲಾಗಿದೆ. ರಾಷ್ಟ್ರಕೂಟರ ಕಾಲಕ್ಕೆ ಆರಂಭವಾಗಿರಬಹುದಾದ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೆಳೆಸಿದ ಅಲಂಕಾರದ ಕೆತ್ತನೆಯ ಶೈಲಿ ಇವಾಗಿವೆ. ಗರ್ಭಗೃಹಗಳಲ್ಲಿ ಯಾವುದೇ ನಿರ್ದಿಷ್ಟ ತಳವಿನ್ಯಾಸವನ್ನು ಹೊಂದಿಲ್ಲ. ಶಿಖರಗಳು ಇರುವುದಿಲ್ಲ ಕೆಲವೊಂದು ಇದ್ದು ನವೀನವಾಗಿವೆ.

**ಕಾಲ:** ಕಾಲದೃಷ್ಟಿಯಿಂದ ಯಾವುದೇ ಶಾಸನಗಳಲ್ಲಿ ಇತರೆ ಖಚಿತವಾದ ದಾಖಲೆಗಳಲ್ಲಿ ಇದು ಕಾಣಬರುವುದಿಲ್ಲ. ರಾಷ್ಟ್ರಕೂಟರ ಕಲ್ಯಾಣಿ ಚಾಲುಕ್ಯರು ಕಾಲಕ್ಕೆ ನಿರ್ಮಿತವಾದ ಈ ದೇವಾಲಯದ ಕಾಲ ಸುಮಾರು ಕ್ರಿ.ಶ. ೯ ರಿಂದ ೧೦ನೆಯ ಶತಮಾನವೆಂದು ಹೇಳಬಹುದು.

ಇನ್ನೊಂದು ವಿಷಯ ಕಲ್ಯಾಣ ಚಾಲುಕ್ಯರ ದೊರೆ ಆರನೆಯ ವಿಕ್ರಮಾದಿತ್ಯನನ್ನು ಒಂದು ಸಾರಿ ಇಲ್ಲಿ ಬಂದು ಮೂರು ವೇಷದಲ್ಲಿ ಇಲ್ಲಿ ನಡೆಯುವ ದಾಸೋಹದಲ್ಲಿ ಊಟ ಮಾಡಿದ್ದನು ಎಂಬುವುದು ಉಲ್ಲೇಖವಿದೆ.[೬೮] ಆದ್ದರಿಂದ ಒಟ್ಟಿನಲ್ಲಿ ಇದರ ಕಾಲ ತ್ರಿಭುವನ ಮಲ್ಲನ ಕಾಲಕ್ಕಿಂತ ಮೊದಲು ಅಂದರೆ ಕ್ರಿ.ಶ. ೯ ರಿಂದ ೧೦ನೆಯ ಶತಮಾನಗಳ ಕಾಲಕ್ಕೆ ಎಂದೂ ತೀರ್ಮಾನಿಸಿದರು.

**ಧರ್ಮ:** ಈ ದೇವಾಲಯವು ಅಲ್ಲಲ್ಲಿ ಬಂಡೆಗಲ್ಲಿನಲ್ಲಿ ಕೊರೆದ ತ್ರಿಶೂಲದ ಚಿನ್ಹೆಗಳಿಂದ ಒಂದು ಮಂಟಪದಲ್ಲಿ ಮಹೇಶ್ವರಿಯ ಪ್ರತಿಷ್ಠಾಪಿಸಿರುವುದರಿಂದ ಅವನು ಶೈವ ಸಂಪ್ರದಾಯದ ದೇವಾಲಯಗಳೆಂದು ಹೇಳಬಹುದಾಗಿದೆ. ಶಿವನನ್ನು ಆರಂಭಿಸುವ ಶೈವ ಧರ್ಮದ ಒಂದು ಪಂಥವಾದ ಕಾಳಮುಖ ಶೈವ ಚಿನ್ಹೆಯಾದ ತ್ರಿಶೂಲ ಹಾಗೂ ಪ್ರತಿಷ್ಠಾಪಿಸಿದ ದೇವತೆಯಾದ ಮೈಲಾರಲಿಂಗ ಶಬ್ಧ ನಿಷ್ಪತಿಯಿಂದಲೂ ಇದು ಶೈವ ಧರ್ಮದ ದೇವಾಲಯವೆಂಬುದು ಸ್ಪಷ್ಟವಾಗುತ್ತದೆ.[೬೯]

**ಶಿವಲಿಂಗ ದೇವಾಲಯ**

ಯಾದಗಿರಿ ಪರಿಸರದಿಂದ ಪಶ್ಚಿಮಕ್ಕೆ ಇರುವ ಸುಮಾರು ೩೫ ವಿಸ್ತೀರ್ಣವಾಗಿರುವ ಗಾಜರ ಕೋಟ ಎಂಬ ಊರಿನ ಬಸ್ ನಿಲ್ಲುವ ಸ್ಥಳದಿಂದ ಕಾಣುವ ಉತ್ತರಾಭಿಮುಖವಾಗಿರುವ ಮುಖ್ಯ ದೇವಾಲಯವು ಭವ್ಯತೆಯ ಸಂಕೇತದಂತೆ ಅದರ ಮಹಾದ್ವಾರ ಎತ್ತರದ ಕಂಬಗಳು ಮೇಲಿನ ವೀಕ್ಷಣಾಲಯ ದೂರದಿಂದಲೇ ಅದರ ಸೌಂದರ್ಯತೆ ಆಕರ್ಷಿಸುತ್ತದೆ. ಈ ದೇವಾಲಯದ ಮುಂದೆ ಸ್ವಲ್ಪ ಎಡಕ್ಕೆ ಕಟ್ಟೆಯ ಮೇಲೆ ಸುಮಾರು ೨೦ ಅಡಿ ಎತ್ತರದ ದೀಪಸ್ತಂಭವು ವನಮೋಹಕವಾಗಿದೆ. ಕಲ್ಲಿನಲ್ಲಿ ಕೆತ್ತಿದ ಈ ದೀಪಸ್ತಂಬದ ತಳಭಾಗದಲ್ಲಿ ಚಿಕ್ಕದಾಗಿಯೂ ವೃತ್ತಾಕಾರವಾಗಿಯೂ ಇದ್ದು ಬರುಬರುತ್ತಾ ದೊಡ್ಡದಾಗಿ ದ್ವಾದಶ ಕೋನಾಕೃತಿಯಲ್ಲಿದ್ದು ಮೇಲೆ ಹೋದಂತೆ ಚಿಕ್ಕದಾಗುತ್ತದೆ. ಆದರೆ ಕೊನೆಯಲ್ಲಿ ತಟ್ಟೆಯಂತೆ ಅಗಲವಾಗಿದ್ದು ಪ್ರತಿ ಭುಜದ ಮಧ್ಯೆ ಒಂಬತ್ತರಂತೆ ಒಟ್ಟು ೧೦೮ ದೀಪಗಳನ್ನಿಡಲು ಮಾಡಿದ ಕೊಂಡಿಯಂತಹ ಕೆತ್ತನೆ ಸುಂದರವಾಗಿದೆ.

**ತಳವಿನ್ಯಾಸ:** ದೇವಾಲಯವು ಆಯತಾಕಾರದ ತಳ ವಿನ್ಯಾಸವನ್ನು ಹೊಂದಿದೆ. ಮಹಾದ್ವಾರವನ್ನೊಳಗೊಂಡಂತೆ ಒಂದು ಸಮುಚ್ಛಯವೇ ಆಗಿದೆ. ವಿಶಾಲವಾದ ಪ್ರಾಂಗಣ, ಅದಕ್ಕೆ ಹೊಂದಿಕೊಂಡಂತೆ ಸುತ್ತಲೂ ಇರುವ ಹಜಾರಗಳು ಮಹಾದ್ವಾರದ ಮೇಲೆ ಮತ್ತು ಅಕ್ಕಪಕ್ಕದ ಹಜಾರಗಳೆರಡರ ಮೇಲೂ ಎರಡಂತಸ್ತು ಇದೆ. ಮಧ್ಯದಲ್ಲಿ ಆಯತಾಕಾರದ ತಳವಿನ್ಯಾಸವುಳ್ಳ ದೇವಾಲಯಗಳು ಹಾಗೂ ಇದೇ ಸಮುಚ್ಚಯಕ್ಕೆ ಹೊಂದಿಕೊಂಡಂತೆ ಪೂರ್ವ ದಿಕ್ಕಿನಲ್ಲಿ ಆಯತಾಕಾರದ ತಳವಿನ್ಯಾಸವುಳ್ಳ ಇನ್ನೊಂದು ದೇವಾಲಯಗಳ ಒಂದು ಸಂಕೀರ್ಣವೇ ಆಗಿದೆ.

**ಮಹಾದ್ವಾರ:** ದೇವಾಲಯದಲ್ಲೇ ಮುಖ್ಯ ಆಕರ್ಷಣೀಯ ಭಾಗವಾಗಿರುವ ಕೆತ್ತನೆಯ ಕಲೆಯಲ್ಲಿ ಉತ್ಕೃಷ್ಟವಾದ ಗ್ರಾನೈಟ್‌ನಲ್ಲಿ ಕೆತ್ತಿದ ಮಹಾದ್ವಾರವು ಈ ಪರಿಸರದ ದೇವಾಲಯಗಳಲ್ಲೇ ಶ್ರೇಷ್ಠವಾದುದು. ಇದು ವರ್ಣಾತೀತವಾದುದು. ಸುಮಾರು ೨೪ ಅಡಿ ಎತ್ತರದ ನಾಲ್ಕು ಕಂಬಗಳು ಗದ್ದಿಗೆಗಲ್ಲು ಚೌಕಾಕೃತಿಯಿದ್ದು ಮೇಲೆ ಅಷ್ಟಾಕೃತಿಗೆ ತಿರುಗಿ ನಂತರ ಕಿರಿದಾಗುತ್ತದೆ. ಚಾಚಿದ ಬೋದಿಗೆಗಳ ಮೇಲೆ ಅಷ್ಟ ಕೃತಿಗೆ ತಿರುಗಿ ನಂತರ ಕಿರಿದಾಗುತ್ತದೆ. ಚಾಚಿದ ಬೋದಿಗೆಗಳ ಮೇಲ ಗವಾಕ್ಷಿ ಮಂಟಪವಿದೆ. ವಿಶಾಲವಾಗಿ ಈ ದ್ವಾರದ ಕೆತ್ತನೆ ನೋಡುಗರನ್ನು ವಿಸ್ಮಯಗೊಳಿಸುತ್ತದೆ.

ನಾಲ್ಕು ವಿಶಾಲದ ಎತ್ತರದ ನಿಲುಪಟ್ಟಿಕೆಗಳಲ್ಲಿ ಕಡೆದು ಜೋಡಿಸಿ ನಿರ್ಮಿಸಿದ ಈ ದ್ವಾರದ ಹೊರಗಿನ ಮೊದಲ ಪಟ್ಟಿಯಲ್ಲಿ ಸುಮಾರು ೧೩ ಇಂಚು ಅಗಲವಾಗಿದ್ದು, ತಳಭಾಗದ

ಎರಡು ಬದಿಗಳಲ್ಲಿ ದ್ವಾರಪಾಲಕರು ಕೆತ್ತನೆ ಇದೆ. ಮೇಲೆ ಹೋದಂತೆ ಸಿಂಹದ ಮುಖ ಹೊಂದಿದ ಪ್ರಾಣಿಯ ಚಿತ್ರ ಆನೆ ಹಾಗೂ ವಿವಿಧ ಕುಸುಮ ತೋರಣಗಳ ಕುಸುರಿ ಕೆತ್ತನೆ ಆಕರ್ಷಕವಾಗಿದೆ. ಇನ್ನೂ ೫ ಇಂಚು ಅಗಲವಿರುವ ಎರಡನೇ ಪಟ್ಟಿಕೆಯಲ್ಲಿ ತಳದಿಂದ ಮೇಲಕ್ಕೆ ವಿವಿಧ ಕುಸುಮ ತೋರಣಗಳ ಸುರಳಿ ಕೆತ್ತನೆ ಸುಂದರವಾಗಿವೆ. ನಯನಾಜೂಕಾಗಿ ಕೆತ್ತನೆ ಇರುವ ಈ ಭಾಗದ ಪಕ್ಕದಲ್ಲಿ ಖಡ್ಗದಾರಿ ದ್ವಾರಪಾಲಕರ ಚಿತ್ರವಿದೆ. ಚಿಕ್ಕ ಚಿಕ್ಕ ಅಂತಸ್ತಾಗಿ ಮಾಡಿ ಮೇಲಕ್ಕೆ ಗರಿ ಬಿಚ್ಚಿದ ಹಂಸದ ಚಿತ್ರ ತುಂಬಾ ಸುಂದರವಾಗಿದೆ. ಅದರ ಮೇಲೆ ಸರಪಳಿ ಮತ್ತು ಹೂವಿನ ಕುಸುರಿ ಕೆಲಸವಿದೆ. ಇನ್ನು ನಾಲ್ಕನೆ ಪಟ್ಟಿಕೆ ಅತ್ಯಂತ ವೈಭವಯುತವಾದ ಕೆತ್ತನೆಯಿಂದ ಕೂಡಿದ ಐದು ಚಿಕ್ಕ ಚಿಕ್ಕ ಅಂತಸ್ತಾಗಿ ಮಾಡಿದ ಇದರ ತಳಭಾಗದಲ್ಲಿ ಗಂಡಭೇರುಂಡ ಗಿಳಿ ಸುಂದರ ಹೂವಿನ ಕುಂಚದಂತಹ ನಾಜೂಕಿನ ಕಲಾಕೃತಿಗಳನ್ನು ಕೆತ್ತಲಾಗಿದೆ. ಮೇಲೆ ಆರು ಹೂವಿನ ಸರಪಳಿಗಳ ಜೋಡಣೆ ದ್ವಾರದ ತಳದಿಂದ ಮೇಲಿದ್ದಂತೆ ಕಾಣುತ್ತಿವೆ. ದ್ವಾರದ ಹಣೆಪಟ್ಟಿಯ ವಿನ್ಯಾಸವಂತು ಹೇಳತೀರದು. ಇವುಗಳ ಲಲಾಟ ಬಿಂದುಗಳ ಮೇಲೆ ಗಂಢಬೇರುಂಢ ಸಿಂಹದ ಮುಖ ಲಿಂಗ ಉಗ್ರರೂಪದ ಸಿಂಹಮುಖ ವಿಶಿಷ್ಠ ಅಲಂಕೃತ ಗಜಲಕ್ಷ್ಮೀ, ಗಣಪತಿ ಮತ್ತು ಅವುಗಳ ಸುತ್ತಲೂ ಹೆಣ್ಣಿನ ಮುಖ ಪ್ರಾಣಿಯ ದೇಹ, ಸಿಂಹ, ಗಿಳಿ, ಹಸು ಮುಂತಾದ ಪ್ರಾಣಿಗಳ ವಿಶಿಷ್ಠಾಕೃತಿಯ ಕೆತ್ತನೆ ಹಾಗೂ ವಿವಿಧ ಬಳ್ಳಿಗಳ ಕೆತ್ತನೆಯಾಗಿದೆ. ಲಲಾಟ ಬಿಂದುವಿನ ಆಕರ್ಷಣೆಯ ಅತ್ಯಂತ ವೈಭವಯುತವಾಗಿದೆ. ಇಡೀ ದ್ವಾರವು ಒಂದೇ ಕಲ್ಲಿನಲ್ಲಿ ಆಗಿದ್ದು, ವಿಶೇಷ ದ್ವಾರದ ಮೇಲೆ ಸುಮಾರು ೩ ಅಡಿ ಎತ್ತರ ಅಶ್ವಗಳಿವೆ. ಛಾವಣಿಗೆ ಹೊಂದಿಕೊಂಡಂತೆ ಕೌಮುದಿ (ಕೌಮುದಿ) ಹೆಣ್ಣಿನ ಒಂಬತ್ತು ಬೋಧಿಗೆಗಳಿದ್ದು ಅವುಗಳ ಮಧ್ಯೆ ವಿವಿಧ ಆಕೃತಿಗಳು ಕ್ರಮವಾಗಿ ತಾಳ ಹಿಡಿದು ನಿಂತ ಮೃದಂಗ ಹಿಡಿದ ಡಮರುಗ ಹಿಡಿದು ನಿಂತ ನವಿಲ ನಾಟ್ಯ ಗರುಡನ ಚಿತ್ರ, ಗಧಾದಾರಿ ಮತ್ತು ಗರುಡರೂಢನ ಉಬ್ಬು ಚಿತ್ರಗಳನ್ನು ಕೆತ್ತಿದ್ದಾರೆ. ಅಲ್ಲದೆ ಇಕ್ಕೆಲಗಳಲ್ಲಿ ಯುದ್ಧದ ಚಿತ್ರಗಳನ್ನು ಕೆತ್ತಲಾಗಿದೆ. ಅದರ ಮೇಲ್ಛಾವಣಿಯಲ್ಲಿ ವಿವಿಧ ಆಕೃತಿಯ ಕಲಾತ್ಮಕ ಚಿತ್ರಗಳನ್ನು ಕಾಣಬಹುದು.

ಮಹಾದ್ವಾರದ ಮೇಲಿನ ಭಾಗವು ಎರಡು ಅಂತಸ್ತುಗಳಿಂದ ಕೂಡಿದೆ. ೩ನೇ ಅಂತಸ್ತು ಮತ್ತು ಅಂಕಣಗಳನ್ನು ಹೊಂದಿದ್ದು ಸುತ್ತಲೂ ೪ ಅಡಿ ಎತ್ತರದ ಗೋಪುರದ ಗೋಡೆ ಇದೆ. ಇದರಿಂದ ಪುನಃ ಮೇಲೇರಿ ಹೋದರೆ ಮಹಾದ್ವಾರದ ವಿಕ್ಷಣಾಲಯಕ್ಕೆ ಬರುತ್ತೇನೆ. ಇದು ಸುಮಾರು ೧೦ ಅಡಿ ಎತ್ತರದ ೪ ಕಂಬಗಳು ೩ ಕಮಾನುಗಳನ್ನು ನಿರ್ಮಿಸಿದೆ. ಸುಮಾರು ೬ ಅಡಿಗಳವರೆಗೆ ಕಂಬಗಳು ಮಧ್ಯ ಸ್ವಸ್ತಿಕ ಮತ್ತು ಕುಸುಮಗಳ ಕುಸುರಿ ಕೆಲಸವಿದೆ. ಛಾವಣಿಯ ಮೇಲೆ ನಂದಿಯ ಮೂರ್ತಿಗಳಿವೆ. ಈ ದೇವಾಲಯದ ಹಜಾರದ ಎಲ್ಲಾ ಕಮಾನುಗಳ ಮಧ್ಯೆ ದೇವತೆಗಳ ನೃತ್ಯ ಭಂಗಿಗಳ ವಿವಿಧ ಪ್ರಾಣಿ ಮತ್ತು ಕನ್ನಡ ಚಿತ್ರಗಳನ್ನು

ಕಾಣುತ್ತೇವೆ. ಈ ದೇವಾಲಯಕ್ಕೆ ಹೊಂದಿಕೊಂಡು ಎಡಗಡೆ ವಿಶಾಲವಾದ ಪ್ರಾಂಗಣ ಸಂಪೂರ್ಣ ಬಿದ್ದು ಹೋಗಿದ್ದು ಅದರ ಮಧ್ಯದಲ್ಲಿ ಬಂದು ಪುಷ್ಕರಣಿ ಇದೆ. ಮತ್ತೊಂದು ದೊಡ್ಡ ಪುಷ್ಕರಣಿ ದೇವಾಲಯದ ಹೊರಗಡೆ ಇದೆ. ಈ ದೇವಾಲಯದ ದ್ವಾರವನ್ನು ದಾಟುತ್ತಿದ್ದಂತೆ ಎರಡು ಕಡೆ ಉತ್ತರಾಭಿಮುಖವಾಗಿ ಒಂದನೆಯವಾಗಿ ಬಸವಲಿಂಗೇಶ್ವರ ದೇವಾಲಯ ಮತ್ತು ರಾಮಲಿಂಗೇಶ್ವರ ಎರನಡಯೆ ದೇವಾಲಯಗಳು ಹೊಂದಿದು ಇದಕ್ಕೆ ಗೋಪುರ ಇರುವುದಿಲ್ಲ.

**ಶೈಲಿ:** ವಿಶಾಲ ದೇವಾಲಯಗಳ ಸಮುಚ್ಚಾಯ ತೆರೆದ ಮುಖಮಂಟಪ ಎತ್ತರದಲ್ಲಿದ್ದ ಗರ್ಭಗೃಹಗಳ ದ್ವಾರಗಳ ಲಲಾಟ ಬಿಂದುಗಳ ಮೇಲೆ ಗಜಲಕ್ಷ್ಮೀ ಗಂಢಬೇರುಂಡ ಗರಡು ಗಣಪತಿ ಮತ್ತು ಲಿಂಗ ಮುಂತಾದ ಚಿತ್ರವಿರುವುದರಿಂದ ಬಳಸಿದ ಬೆಣಚುಕಲ್ಲುಗಳು, ಇದರಿಂದಾಗಿ ರಾಷ್ಟ್ರಕೂಟರ ಕೊನೆಯ ಕಲ್ಯಾಣ ಚಾಲುಕ್ಯರ ಆರಂಭ ಕಾಲದ ವಾಸ್ತುಶಿಲ್ಪದ ಲಕ್ಷಣಗಳನ್ನು ಕಾಣಬಹುದಾಗಿದೆ.

**ಕಾಲ:** ಶೈಲಿಗನುಗುಣವಾಗಿ ನಿರ್ದಿಷ್ಟ ಕಾಲದ ಗಣನೆ ಸಾಧ್ಯವಿಲ್ಲದಿದ್ದರೂ ೯ ರಿಂದ ೧೧ನೆಯ ಶತಮಾನಗಳ ಮಧ್ಯ ನಿರ್ಮಾಣವಾಗಿರಬಹುದೆಂದು ಊಹಿಸಲಾಗಿದೆ.

**ಧರ್ಮ:** ಲಲಾಟ ಬಿಂದುಗಳ ಮೇಲಣ ಗಣಪತಿ ಲಿಂಗ ಹಾಗೂ ಗರ್ಭ ಗೃಹ ಪೀಠದಲ್ಲಿರುವ ಲಿಂಗಗಳು ನಂದಿ ಮುಂತಾದವುಗಳಿಂದಾಗಿ ಇದು ಶೈವ ಸಂಪ್ರದಾಯಕ್ಕೆ ಸೇರಿದ ದೇವಾಲಯವೆಂಬುದರಲ್ಲಿ ಸಂಶಯವಿಲ್ಲ.

**೩.೩. ಮಲ್ಲಿಕಾರ್ಜುನ ದೇವಾಲಯ**

ಯಾದಗಿರಿ ಪರಿಸರದಿಂದ ಪಶ್ಚಿಮಕ್ಕೆ ಇರುವ ಸುಮಾರು ೩೫ ಕಿ.ಮೀ. ವಿಸ್ತೀರ್ಣವಾಗಿರುವ ಗಾಜರ ಕೋಟೆ ಎಂಬ ಗ್ರಾಮದಲ್ಲಿ ಸುಂದರವಾಗಿ ವಾಸ್ತುಶಿಲ್ಪದಿಂದ ನಿರ್ಮಾಣವಾಗಿರುವ ಮಲ್ಲಿಕಾರ್ಜುನ ದೇವಾಲಯ "ಶ್ರೀ ಚನ್ನಪ್ಪಯ್ಯರೆಂಬ ಶರಣರು ಶ್ರೀಶೈಲದಿಂದ ಕಾಲುನಡಿಗೆಯಿಂದಲೇ ಬಂದು ಮೂರ್ತಿಯನ್ನು ತಂದು ಸ್ಥಾಪಿಸಿದರೆಂದು ಪ್ರತೀತಿಯಿದೆ. ಇನ್ನೊಂದು ಮುಖ್ಯವಾದ ಚಾರಿತ್ರಿಕ ಅಂಶವೆಂದರೆ ಕಾಕಳುವಾರದ ಪ್ರಾಂತೀಯ ದೊರೆಗಳ ವಿರುದ್ಧ ಸಿಡಿದೆದ್ದ ಶರಣರು ಈ ಕ್ಷೇತ್ರ ಮರಿಕಲ್ಯಾಣವೆಂದೆನಿಸಿತ್ತು"[೮] ಎಂದೂ ತಿಳಿದುಬರುತ್ತದೆ.

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಸುಂದರವಾಗಿದೆ. ಎತ್ತರವಾದ ಗೋಪುರದ ನಿರ್ಮಾಣವಾಗಿದ್ದು, ದೂರದಿಂದಲೇ ಆಕರ್ಷಿಸುತ್ತದೆ. ದೇವಾಲಯದ ಸುತ್ತಲೂ ಸುಮಾರು ೬ ಅಡಿ ಎತ್ತರದ ರಕ್ಷಣಾಗೋಡೆ ವಿಶಾಲವಾದ ಪ್ರಾಂಗಣವನ್ನುಂಟು ಮಾಡಿದೆ. ಮಹಾದ್ವಾರವು ಸಂಪೂರ್ಣವಾಗಿ ಬಿದ್ದುಹೋಗಿದ್ದು ಅದರ ಹೊಸ್ತಿಲು ಅರ್ಧಕಟ್ಟೆಯವರೆಗೆ ಮಾತ್ರ ಉಳಿದಿವೆ.

ಒಳಭಾಗದ ಎರಡೂ ಕಡೆ ಹಜಾರುಗಳಿದ್ದು ಬಿದ್ದು ಹೋಗಿರುವ ಅವಶೇಷಗಳು ಮಾತ್ರ ಕಂಡುಬರುತ್ತವೆ.

**ತಳವಿನ್ಯಾಸ:** ಸುಮಾರು ೪೦ x ೮೦ ಆಯತಾಕಾರದ ತಳವಿನ್ಯಾಸವುಳ್ಳ ಈ ದೇವಾಲಯ ಐದು ಅಡಿ ಎತ್ತರದ ಜಗುಲಿಯ ಮೇಲೆ ಕಟ್ಟಲ್ಪಟ್ಟಿವೆ. ಜಗಲಿಯ ತಳಪಟ್ಟಿಕೆಗಳಲ್ಲಿ ಸುತ್ತಲೂ ಆನೆ, ಮಂಟಪದ ಮಧ್ಯೆ ನಂದಿ, ಸರಪಳಿ, ಹುಲಿ, ಮದಗಜಗಳ ಹೋರಾಟ, ಹುಲಿ ಮತ್ತು ಸುಂದರವಾದ ಹೂವಿನ ಚಿತ್ರಗಳನ್ನು ಕೆತ್ತಲಾಗಿದೆ. ಮೆಟ್ಟಿಲುಗಳನ್ನು ಹತ್ತಿ ಮೇಲೇರಿದಾಗ ವಿಶಾಲವಾದ ತೆರೆದ ಮಂಟಪ ಪಶ್ಚಿಮದ ಕೊನೆಯ ಮಧ್ಯದಲ್ಲಿ ಗರ್ಭಗೃಹವನ್ನೂ ಮತ್ತು ಹೊರ ಪ್ರದಕ್ಷಣಾ ಪಥವನ್ನು ಕಾಣುತ್ತೇವೆ.

**ನವರಂಗ ಅಥವಾ ನಂದಿ ಮಂಟಪ:** ಗರ್ಭಗೃಹಕ್ಕೆ ಹೊಂದಿಕೊಂಡು ೬ ಅರ್ಧಕಂಬಗಳನ್ನು ಬಿಟ್ಟು ಒಟ್ಟು ೨೨ ಕಂಬಗಳು (೨೨ + ೬) ಹೊಂದಿದ್ದು, ನವರಂಗವು ವಿಶಾಲವಾಗಿದ್ದು ಸುಂದರವಾದ ಈ ಕಂಬಗಳು ತಳಭಾಗದಲ್ಲಿ ಚೌಕಾಕಾರವಾಗಿದ್ದು ಮೇಲಕ್ಕೇರಿದಂತೆ ಮಧ್ಯ ಪಷ್ಟಿಕೋನಕ್ಕೆ ತಿರುಗಿ ಪುನಃ ಚೌಕವಾಗಿ ಕೊನೆಯಲ್ಲಿ ವೃತ್ತಾಕಾರವನ್ನು ಹೊಂದಿವೆ ಗರ್ಭ ಗೃಹದ ಮುಂದುಗಡೆ ಪ್ರತಿ ಮೂರರಂತೆ (೩ x ೪) ನಾಲ್ಕು ಸಾಲುಗಳು ಒಟ್ಟು ೧೨ ಕಂಬಗಳಿವೆ. ಗರ್ಭಗೃಹದ ಹಿಂದುಗಡೆ ಪ್ರತಿ ನಾಲ್ಕರಂತೆ ನಾಲ್ಕು ಸಾಲುಗಳ (೪ x ೪) ೬ ಕಂಬಗಳು ಹೊಂದಿದೆ. ಇದರಲ್ಲಿ ೬ ಕಂಬಗಳು ಗರ್ಭಗೃಹದ ನಿರ್ಮಾಣಕ್ಕೆ ಅನುವು ಮಾಡಿಕೊಟ್ಟಿವೆ. ಗರ್ಭಗೃಹದ ಮುಂದಿನ ನಾಲ್ಕು ಕಂಬಗಳ ಮಧ್ಯೆ ೧೨ x ೧೦ ಅಡಿ ಆಯತಾಕಾರದ ನವರಂಗವಿದ್ದು ಅದರ ಮಧ್ಯದಲ್ಲಿ ಕೊರೆದು ಸುಮಾರು ೩೬ x ೧೨ ಇಂಚು ಆಯತಾಕಾರದ ಕರಿಕಲ್ಲಿನ ಸುಂದರ ನಂದಿ ಗರ್ಭಗೃಹಕ್ಕೆ ಅಭಿಮುಖವಾಗಿದೆ. ಈ ತೆರೆದ ನವರಂಗದ ಮೇಲೆ ಭುವನೇಶ್ವರಿ ಇರುವುದಿಲ್ಲ.

**ಗರ್ಭಗೃಹದ ದ್ವಾರ:** ಸುಮಾರು ೬ ಅಡಿ ಎತ್ತರದ ಗರ್ಭಗೃಹದ ದ್ವಾರ ಅದರ ಮೇಲಿನ ಕುಸುರಿ ಕೆತ್ತನೆ ಸೂಕ್ಷ್ಮ ಕಲಾತ್ಮಕಕ್ಕೆ ಹಿಡಿದ ಕನ್ನಡಿಯಂತಿದೆ. ಮುಂಭಾಗದ ಮಧ್ಯೆ ಹೂ ಎರಡೂ ಕಡೆ ಸಿಂಹ ಹುಲಿ ಎರಡು ಅಡಿ ಎತ್ತರದ ಮೇಲಕ್ಕೆ ನವಿಲಿನ ಗರಿಗಳ ತೋರಣಗಳು ನಾಜೂಕಾದ ಕೆತ್ತನೆಯನ್ನು ಪರಿಚಯಿಸುತ್ತವೆ. ಇದರ ಕೊನೆಯಲ್ಲಿ ಸುಂದರ ಅಶ್ವಗಳಿವೆ. ಇನ್ನೂ ಕೊನೆಯ ಎರಡು ನಂದಿಗಳ ನಡುವೆ, ಹುಲಿ ದೇಹದ ಮಾನವನ ಮುಖ ಇರುವ ಕಿನ್ನರ ಪುರುಷ ಚಿತ್ರಗಳ ಮಧ್ಯೆ ಲಿಂಗವಿದೆ. ಈ ಭಾಗದ ಕೆತ್ತನೆ ದೇವಾಲಯದ ಕೆತ್ತನೆಯ ಅತ್ಯಂತ ಸೂಕ್ಷ್ಮ ಹಾಗೂ ಸುಂದರ ಮೂರ್ತಿಗಳಿವೆ. ಎಡಗಡೆ ಮೇಲೆ ನಂದಿ ಮುಖದ ಮೃದಂಗ ಹಿಡಿದ ಭಂಗಿಯಿದ್ದರೆ ಬಲಗಡೆ ಕೈಯಲ್ಲಿ ಲಿಂಗ ಹಿಡಿದು ನಿಂತ ಭಂಗಿಯ ಮೂರ್ತಿ ಇದೆ. ಕೆಳಗಡೆ ಎರಡೂ ಕಡೆ ದ್ವಾರಪಾಲಕರಿದ್ದಾರೆ.

ಗರ್ಭಗೃಹ ಇದೊಂದು ವೈಶಿಷ್ಟ್ಯಪೂರ್ಣವಾದ ಗರ್ಭಗೃಹ ಹೊರ ಹಾಗೂ ಒಳಗೆಲ್ಲ ಗೋಡೆಗಳಲ್ಲಿಯೂ ಅಸಂಖ್ಯಾ ಮೂರ್ತಿಗಳನ್ನು ಕೆತ್ತಲಾಗಿದೆ. ಒಳಭಾಗದ ಭುವನೇಶ್ವರಿಯಿಂದ ಹಿಡಿದು ಎಲ್ಲಾ ಕಡೆ ತುಂಬಾ ಕೆತ್ತನೆಯ ಕೆಲಸವಾಗಿದೆ. ಒಳಗೋಡೆಯ ನಾಲ್ಕು ಬದಿಗೆ ಮತ್ತು ಪಟ್ಟಿಕೆಗಳನ್ನಾಗಿ ಮಾಡಿ ಮೊದಲನೆ ಪಟ್ಟಿಯಲ್ಲಿ ೨೮ ಸಾಲು ಚಾಕ ಕ್ಷೇತ್ರಗಳಲ್ಲಿ ಎರಡನೆಯ ಪಟ್ಟಿಯಲ್ಲಿ ೨೪ ಸಾಲು ಕ್ಷೇತ್ರಗಳಲ್ಲಿ ನೂರಾರು ವಿವಿಧ ಭಂಗಿಯ ದೇವತೆಗಳ ಯಕ್ಷ-ಯಕ್ಷಣಿಯರ ಚಿತ್ರಗಳನ್ನು ವಿಶೇಷವಾಗಿ ಕಲ್ಯಾಣದ ಕ್ರಾಂತಿಯ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ಗಣಪತಿ ಲಿಂಗಾರಾಧನೆ ಅಶ್ವಾರೂಢ ಬಸವಣ್ಣಪಾದುಕೆಗಳನ್ನು ತಲೆಯ ಮೇಲೆ ಹೊತ್ತ ಶರಣ ಹರಳಯ್ಯನವರನ್ನು ಅವರನ್ನು ಆಶೀರ್ವದಿಸುವ ಬಸವಣ್ಣನವರ ಪಕ್ಕದಲ್ಲಿ ಲಿಂಗ ಮಂಟಪದಲ್ಲಿ ಬಸವಣ್ಣ ಬೇಡರ ಕಣ್ಣಪ್ಪನು ಶಿವಲಿಂಗ ಪೂಜೆಯಲ್ಲಿ ಕಣ್ಣು ಕಿತ್ತುಕೊಳ್ಳುವ ಚಿತ್ರ ಅಕ್ಕಮಹಾದೇವಿ ತಂಬೂರಿ ಹಿಡಿದಿರುವ ಮೂರ್ತಿಗಳು ಎಷ್ಟು ನೋಡಿದರೂ ಸಾಲು ಸಾಲಾಗಿ ಕಣ್ಮನ ಸೆಳೆಯುವಂತಿಹವು. ವಿಶೇಷವಾಗಿ ಒಂದು ಬೇಡರ ಕಲ್ಯಾಣದ ಕ್ರಾಂತಿಯಲ್ಲಿ ಶರಣರನ್ನು ಆನೆಯಿಂದ ತುಳಿಸಿದ ಅವರ ರುಂಡ ಚೆಂಡಾಡಿದ ಚಿತ್ರ ಅದರಲ್ಲೂ ಖಡ್ಗವೊಂದು ದೇಹದಿಂದ ರುಂಡವನ್ನು ಬೇರ್ಪಡಿಸಿದಾಗ ರುಂಡವು ದೂರದಲ್ಲಿ ಬಿದ್ದ ಚಿತ್ರ ನಿಜಕ್ಕೂ ಆಶ್ಚರ್ಯ ಮೂಡಿಸುವಂತಹದ್ದು. ಕಲ್ಯಾಣದ ಕ್ರಾಂತಿಯ ಅತಿರೇಕದ ನೋಟ ಕಣ್ಮುಂದೆ ಕಟ್ಟಿದಂತಾಗುತ್ತದೆ. ಒಂದು ಚೂರು ಬಿಡದೆ ಕಟೆಯಲ್ಪಟ್ಟ ಶಿಲ್ಪಾಕೃತಿಗಳು ಮೆಚ್ಚುವಂತಹವು.

ಭುವನೇಶ್ವರಿಯಂತೂ ವಿವಿಧ ಬಳಿಯಾಕಾರದ ಅಲಂಕಾರಿಕೆಯನ್ನು ಒಳಗೊಂಡಿದೆ. ಗರ್ಭಗೃಹದ ಹೊರಗೋಡೆಯಲ್ಲಿ ಮೂರು ಸ್ತರದ ಕೆತ್ತನೆಯ ಶಿಲ್ಪಾಕೃತಿಗಳು ನೋಡುಗರನ್ನು ಬೆರಗುಗೊಳಿಸುತ್ತವೆ. ದಕ್ಷಿಣಕ್ಕೆ ದಕ್ಷಬ್ರಹ್ಮನ ಕೈಯಲ್ಲಿ ಲಿಂಗ ಹಿಡಿದು ನಿಂತು ಪೂಜಿಸುತ್ತಿರುವ ಇನ್ನೊಂದು ರುದ್ರಾಕ್ಷಿ ಹಿಡಿದು ಜಪಮಾಡುವ ಅನೇಕ ಮೂರ್ತಿಗಳಿವೆ. ಹಿಂದೆ ಬಾಗಿದ ಗೋಡೆಯಿಂದ ಸುಮಾರು ೪ ಇಂಚು ಮುಂದೆ ಬಾಗಿರುವ ದೇಹದ ಕೆತ್ತನೆ ನಿಜಕ್ಕೂ ರಮ್ಯ. ಪಶ್ಚಿಮಕ್ಕೆ ಶೀರ್ಷಾಸನದ ಭಂಗಿಯಲ್ಲಿ ದಶಮುಖ ರಾವಣ, ಆಂಜನೇಯ, ಮಾನವ ಮುಖದ ಸರ್ಪ ಮುಂತಾದ ಆಕರ್ಷಕ ಕೆತ್ತನೆಗಳಿವೆ. ಉತ್ತರಕ್ಕೆ ಅನೇಕ ಮೂರ್ತಿಗಳಲ್ಲಿ ಆಂಜನೇಯ, ಚತುರ್ಮುಖ ವಿಷ್ಣು, ತ್ರಿಮುಖ ಬ್ರಹ್ಮ, ರುದ್ರಾಕ್ಷಿಗಳ ಮಧ್ಯೆ ದೊಡ್ಡದಾದ ಬಸವಣ್ಣನ ಮೂರ್ತಿ ಈ ತ್ರಿಮೂರ್ತಿಗಳ ಸಂಗಮವು ನಿಜಕ್ಕೂ ಕಲೆಯು ಚಿರಾಯುವೆನಿಸಿವೆ.

**ಶಿಖರ:** ಶಿಖರವು ದೇವಾಲಯದಲ್ಲಿ ಊರ್ಧ್ವ ಮುಖ ಕ್ರಮದಲ್ಲಿ ಐದನೆಯ ಭಾಗ ಗ್ರೀವ್ ಮತ್ತು ಸ್ತೂಪಿಯ (ಕಲಶ) ನಡುವೆ ಬಹುಪಾಲು ಗುಮ್ಮಟದ ಆಕಾರದಲ್ಲಿರುವುದೆ ಶಿಖರವೆಂದು ಸ್ಥೂಲವಾಗಿ ಹೇಳಬಹುದು. ಇದರ ಮೇಲೆ ಶಿಖಾ(ಸ್ತೂಪಿ) ಇರುವುದರಿಂದ ಇದಕ್ಕೆ ಶಿಖರ ಎಂದೂ ಹೆಸರಿದೆ. ಶೋಭಾಯ ಮಾನವಾಗಿರುವುದು" ಈ ಹಿನ್ನೆಲೆಯಲ್ಲಿ ಈ

ದೇವಾಲಯದ ಗರ್ಭಗೃಹದ ಮೇಲಿನ ಶಿಖರವು ಆರು ವಿಮಾನುಗಳಿಂದ ಕೂಡಿದ್ದು ಬಹುಭುಜಾಕೃತಿಯಲ್ಲಿವೆ. ಅವುಗಳ ಮಧ್ಯೆ ಚಿಕ್ಕ ಚಿಕ್ಕ ಮಂಟಪಗಳಿವೆ. ಬರುಬರುತ್ತಾ ಚಿಕ್ಕದಾಗುತ್ತದೆ. ಕೊನೆಯಲ್ಲಿ ನಾಲ್ಕು ದಿಕ್ಕಿಗೂ ನಂದಿಗಳಿವೆ. ಮಧ್ಯೆ ಗೋಳವಿದೆ. ಹೋರಚಾಚಿದ ಭಾವಣಿ ಮೇಲೆ ಸುಮಾರು ಮೂರು ಅಡಿ ಎತ್ತರದ ಗೋಡೆ ನಾಲ್ಕು ಅಡಿ ಚಿಕ್ಕ ಚಿಕ್ಕ ಮಂಟಪಗಳು ಶಿಖರವನ್ನು ಹೊಂದಿವೆ. ದೇವಾಲಯದ ಸಮೀಪ ಉತ್ತರಕ್ಕೆ ಪುಷ್ಕರಣಿ ಇವೆ.

**ಶೈಲಿ:** ಆಯಾತಾಕಾರದ ತಳವಿನ್ಯಾಸ, ತೆರೆದ ಮಂಟಪದ, ಎತ್ತರದ ಜಗಲಿ, ಹೊರ ಪ್ರದಕ್ಷಣಾ ಪಥ, ನವರಂಗದಲ್ಲಿ ನಂದಿಗರ್ಭ ಗೃಹದ ಒಳ ಹೊರಗೋಡೆಗಳಲ್ಲಿ ಸುಮಾರಾದ ಕೆತ್ತನೆ ಮುಂತಾದವುಗಳಿಂದ ಕಲ್ಯಾಣ ಚಾಲುಕ್ಯ ಮತ್ತು ವಿಜಯನಗರದ ಸಮ್ಮಿಶ್ರ ಶೈಲಿ ಹೊಂದಿರುತ್ತದೆ ಎಂದು ತಿಳಿಯಲಾಗಿದೆ.

**ಕಾಲ ಮತ್ತು ಧರ್ಮ:** ಕಲ್ಯಾಣ ಕ್ರಾಂತಿಯ ಸ್ಪಷ್ಟ ಚಿತ್ರಣದ ಶಿಲ್ಪಕಲಾ ಇರುವುದರಿಂದ ಇದು ೧೨ನೆಯ ಶತಮಾನದ ನಂತರದಲ್ಲಿ ಆದ ದೇವಾಲಯವೆನ್ನುವುದರಲ್ಲಿ ಸಂಶಯವಿಲ್ಲ. ಕಾಕಲುವಾರ ದೊರೆಗಳ ವಿರುದ್ಧ ಹೋರಾಟದ ಈ ಕ್ರಾಂತಿ ಭೂಮಿಯಲ್ಲಿ ಸುಮಾರು ೧೩ನೇ ಶತಮಾನದಲ್ಲಿ ಈ ದೇವಾಲಯ ನಿರ್ಮಿತವಾಗಿದೆ. ಅಂದರ ಕಳಚೂರ್ಯರ ಕಾಲದ ಕೊನೆಯಲ್ಲಿ ವೀರಶೈವ ಧರ್ಮದ ಉನ್ನತಿಯ ಕಾಲದಲ್ಲಿ ಇದು ನಿರ್ಮಾಣವಾಗಿರಬಹುದು.

### ೩.೨. ಮೂರ್ತಿಶಿಲ್ಪ

ಮೂರ್ತಿಶಿಲ್ಪದ ಕಲ್ಪನೆಗಳು ಭಾರತದಲ್ಲಿ ಸಿಂಧೂ ನದಿಯ ನಾಗರಿಕತೆಯಿಂದಲೂ ಕಾಣಬಹುದಾಗಿದೆ. ಮೊದಲು ರಚನೆಯಾಗಿರುವ ಗೂಳಿ, ಲಿಂಗ, ಪಶುಪತಿ, ಶಿವ, ನೃತ್ಯ, ಮಾಡುವ ಸ್ತ್ರೀ ಮುಂತಾದ ಪ್ರಮುಖ ಶಿಲ್ಪಗಳು ಇಂದಿಗೂ ಚರ್ಚಿತ ವಿಷಯಗಳಾಗಿವೆ. ಸಾಮಾನ್ಯವಾಗಿ ಮೂರ್ತಿಶಿಲ್ಪಗಳನ್ನು ದೇವಾಲಯದ ಗರ್ಭಗೃಹ, ನವರಂಗ, ದೇವಕೋಷ್ಠ, ಶಿಖರ ಭಾಗ, ದೇವಾಲಯ ಹೊರಭಾಗ ಹೀಗೆ ಹಲವು ಹತ್ತು ಕಡೆ ಸ್ಥಾಪಿಸಿರುವುದು ಕಂಡುಬರುತ್ತದೆ. ಇದರಲ್ಲಿ ಶಿಲ್ಪಿಯ ಕೈಚಳಕವೇ ಪ್ರಧಾನ ಪಾತ್ರವಹಿಸುತ್ತಿತ್ತು. ಇಂತಹ ಶಿಲ್ಪಗಳನ್ನು ಕೆತ್ತುವ ಉದ್ದೇಶವಾದರೂ ಏನೂ ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಸಾಮಾನ್ಯವಾಗಿ ದೇವಾಲಯದ ಗರ್ಭಗುಡಿಯಲ್ಲಿರುವ ಮೂಲ ದೇವತೆಗೆ ಸಂಬಂಧಿಸಿದಂತೆ ಉಪದೇವತೆಗಳನ್ನು ಕೆತ್ತುತ್ತಿದ್ದರು. ದೇವಾಲಯಕ್ಕೆ ಹೆಚ್ಚಿನ ಸೌಂದರ್ಯ ಬರಲಿ ಎಂಬ ಕಾರಣಕ್ಕೂ ಇಂತಹ ಮೂರ್ತಿ ಶಿಲ್ಪಗಳನ್ನು ರಚಿಸಿರುವುದುಂಟು.

**ಅಮೃತಲಿಂಗೇಶ್ವರ:** ದೇವಾಲಯದ ಗರ್ಭಗೃಹದಲ್ಲಿ ೪ ಅಡಿ ಎತ್ತರದ ಅಮೃತಲಿಂಗೇಶ್ವರ ವಿಗ್ರಹವನ್ನು ಕಪ್ಪು ಕಡುಶಿಲೆಯಿಂದ ಕೆತ್ತಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಸೌಮ್ಯಶಾಂತ

ಮೂರ್ತಿ ವಿಗ್ರಹದ ಮುಖದ ಭಾಗ ಕಣ್ಣು, ಮೂಗು, ಬಾಯಿ, ಕೆನ್ನೆಗಲ್ಲಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಮೂರ್ತಿಯ ಮೇಲುಗೈಗಳಲ್ಲಿ ಶಂಕು ಚಕ್ರಗಳಿಗದ್ದು ಅವನ್ನು ಕೈಗಳಲ್ಲಿರಿಸಿದ ಭಂಗಿ ಸಮರ್ಪಕವಾಗಿಲ್ಲ. ಮೇಲಿನ ಎರಡು ಕೈಗಳಿಗೆ ಹೋಲಿಸಿದರೆ ಕೆಳಗಿನ ಕೆತ್ತನೆಗಳು ಅಸಮ ಪ್ರಮಾಣದಲ್ಲಿದೆ. ಭುಜದ ಭಾಗದಲ್ಲಿ ಗುಂಗುರು ಕೂದಲಿನ ಉಂಗುರುಗಳು ಎರಡು ಭುಜಗಳಿಂದಲೂ ಇಳಿಬಿದ್ದಿರುವಂತೆ ಕಾಣುವ ವಿಶೇಷ ಕೆತ್ತನೆಯಿದೆ.

**ಶ್ರೀದೇವಿ ಭೂದೇವಿ:** ಅಮೃತಲಿಂಗೇಶ್ವರ ಮೊಣಕಾಲಿನ ನೇರಕ್ಕಿರುವ ಮೂಲಶಿಲ್ಪವನ್ನು ಕಲ್ಲಿನಲ್ಲಿ ಕೆತ್ತಿರುವ ಎಡ ಬಲ ಭಾಗಗಳಲ್ಲಿ ಅರ್ಧಭಾಗದಷ್ಟು ಉಬ್ಬು ಕೆತ್ತನೆಯಲ್ಲಿರುವ ಎರಡು ಸ್ತ್ರೀ ಶಿಲ್ಪಗಳಿದ್ದು ಅವು ಶ್ರೀದೇವಿ, ಭೂದೇವಿ ಮೂರ್ತಿಶಿಲ್ಪಗಳಾಗಿವೆ. ಇವುಗಳಿಗೂ ಉದ್ದವಾದ ಕಿರೀಟವಿದ್ದು ಎರಡರೆಡು ಕೈಗಳು ಮಾತ್ರ ಸ್ಪಷ್ಟವಾಗಿ ಕಾಣುತ್ತೇವೆ. ಒಂದು ಕೈಯನ್ನು ಇಳಿಬಿಟ್ಟ ವಿಗ್ರಹಗಳ ಮುಖಭಾಗ ಅಂಗಾಂಗಗಳಲ್ಲಿ ಸ್ಫುಟತೆಯಿಲ್ಲ.

**ದ್ವಾರಪಾಲಕರು:** ಸುಖನಾಸಿಯ ದವಾರದ ಎಡ ಮತ್ತು ಪಾರ್ಶ್ವಗಳ ನವರಂಗದ ಭಾಗವನ್ನು ಸುಮಾರು ೫ ಅಡಿ ಅಗಲಕ್ಕೆ ವಿಸ್ತರಿಸಿಕೊಳ್ಳಲಾಗಿದೆ. ದವಾರದ ಇಕ್ಕೆಲಗಳಿರುವ ಎರಡು ಕೋಷ್ಠಕಗಳಲ್ಲಿ ತ್ರಿಭಂಗದಲ್ಲಿರುವ ಸುಮಾರು ೪ ಅಡಿಗಳಷ್ಟು ಎತ್ತರದ ವೈಷ್ಣವ ದ್ವಾರಪಾಲಕರು ಉಬ್ಬು ಕೆತ್ತನೆ ವಿಗ್ರಹಗಳಿವೆ. ಕೋರೆಹಲ್ಲುಗಳಿಂದ ಕೂಡಿದ ಈ ದ್ವಾರಪಾಲಕರ ಅಗಲವಾದ ಅರಳಿಸಿದ ಕಣ್ಣುಗಳಿಗೆ ಬಿಳಿ ಬಣ್ಣ ಲೇಪಿಸಿರುವುದರಿಂದ ಅದು ಮತ್ತಷ್ಟು ರೌದ್ರವಾಗಿ ಕಾಣುತ್ತದೆ. ದ್ವಾರಪಾಲಕರ ಮೇಲಿನ ಕೈಗಳಲ್ಲಿ ಶಂಖ ಮತ್ತು ಚಕ್ರಗಳಿವೆ. ಕೆಳಗೈಗಳಲ್ಲಿ ಒಂದರಲ್ಲಿ ಗದೆಯಿದ್ದರೆ ಮತ್ತೊಂದು ಕೈ ವರದ ಹಸ್ತವಾಗಿದೆ. ವಸ್ತ್ರಾಭರಣಗಳನ್ನೂ ಶಿಲ್ಪದಲ್ಲಿಯೆ ಕೂಡಿರಿಸಲಾಗಿದೆ.

**ಗಿರಿದುರ್ಗದ ಮೇಲಿರುವ ಜೈನ ತೀರ್ಥಂಕರು**

ಯಾದಗಿರಿ ಪರಿಸರದ ಗಿರಿದುರ್ಗದ ಮೇಲೆ ಜೈನರ ಕುರುಹುಗಳನ್ನು ಮೆರೆಯದಷ್ಟು ದಟ್ಟವಾಗಿ ಬೆಟ್ಟದ ದೊಡ್ಡ ಬಂಡೆಯಲ್ಲಿ ಗುಹಾಕಾರವಾಗಿ ಕೊರೆದ ಭಾಗವಿದ್ದು ಅದರಲ್ಲಿ ನಿಂತ ಭಂಗಿಯ ಮೂರು ಜೈನರ ೫ ಅಡಿ ಎತ್ತರದಲ್ಲಿರುವ ಮೂರ್ತಿಗಳ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ಮಧ್ಯದಲ್ಲಿರುವ ಮೂರ್ತಿಯ ಹಿಂದೆ ಸರ್ಪವಿರುವುದರಿಂದ ಇದು ಪಾರ್ಶ್ವನಾಥನೆಂದು ಅದರ ಇಕ್ಕೆಲುಗಳಲ್ಲಿರುವ ಮೂರ್ತಿಗಳ ಪಾದದ ಕೆಳಗೆ ಎಡದಲ್ಲಿ ಶಂಖವಿರುವುದರಿಂದ ನೇಮಿನಾಥನೆಂದು, ಬಲಗಡೆ ಸಿಂಹವಿರುವುದರಿಂದ ಮಹಾವೀರನೆಂದು ತಿಳಿದು ಬರುತ್ತದೆ. ಈ ಮೂರ್ತಿಗಳ ಕೆಳಗಡೆ ಕುಳಿತ ಭಂಗಿಯಲ್ಲಿ ಯಕ್ಷ ಯಕ್ಷಿಣಿಯರ ಮಹೇಂದ್ರ (ಶಂಖ) ಜ್ವಾಲಾಮುಖಿನಿಯಾದ (ತ್ರಿಶೂಲ) ಚಿತ್ರಗಳನ್ನು ಸ್ಪಷ್ಟವಾಗಿ ಕೆತ್ತಲಾಗಿದೆ.

**ಚೆನ್ನಪ್ಪನ ಬೆಟ್ಟದ ಜೈನ ತೀರ್ಥಂಕರು**

ಯಾದಗಿರಿ ಪರಿಸರದ ಪೂರ್ವದಿಕ್ಕಿಗೆ ಇರುವ ಚೆನ್ನಪ್ಪನ ಬೆಟ್ಟದಲ್ಲಿ ೨೪ ಅಡಿ ಉದ್ದ ೧೫ ಅಡಿ ಅಗಲ, ೧೨ ರಿಂದ ೧೫ ಅಡಿ ಎತ್ತರದಲ್ಲಿರುವ ಗುಹಾಂತರ ಬಸದಿಯ ಒಳ ಬೆನ್ನಗೋಡೆಯ ಹೆಬ್ಬಂಡೆಯ ಮೇಲೆ ಸುಮಾರು ೬ ಅಡಿ ಎತ್ತರದ ಜೈನ ತೀರ್ಥಂಕರನ ಮೂರ್ತಿ ಇದ್ದು ಪದ್ಮಾಸನದಲ್ಲಿ ಕುಳಿತ ದೊಡ್ಡ ಮೂರ್ತಿಯ ಪಕ್ಕದಲ್ಲಿ ಕ್ರಮವಾಗಿ ೩ ಸಣ್ಣ ಮೂರ್ತಿಗಳನ್ನು ಒಂದರ ಮೇಲೊಂದರಲ್ಲಿ ಕೆತ್ತಲಾಗಿದೆ.

ಎಲ್ಲವುಗಳು ಒಂದೇ ಚೌಕಟ್ಟಿನಲ್ಲಿರುವಂತೆ ಕೆತ್ತಲಾಗಿದೆ. ಒಟ್ಟು ಸಾಲು ಬ್ರಂಜಿಕೆಯಲ್ಲಿ ೨೪ ಜೈನ (ತೀರ್ಥಂಕರ) ಮೂರ್ತಿಗಳಿವೆ. ಬಸದಿಯ ಎಡಭಾಗದಲ್ಲಿ ೩ ಅಡಿ ಎತ್ತರದ ಕಲ್ಲಿನ ಚೌಕದಲ್ಲಿ ಸುಂದರವಾದ ಪದ್ಮಾವತಿಯ ಮೂರ್ತಿಯನ್ನು ಕೆತ್ತಲಾಗಿದೆ. ಮುಖದ್ವಾರದ ಮೇಲೆ ಸುಮಾರು ೨೫ ಅಡಿ ಎತ್ತರದಲ್ಲಿ ಹೆಬ್ಬಂಡೆಯಲ್ಲಿಯೇ ೪ ಅಡಿ ಎತ್ತರದ ಅಗಲವಾದ ಪಾರ್ಶ್ವನಾಥನ ಉಬ್ಬು ಚಿತ್ರದ ಮೂರ್ತಿಯನ್ನು ಕೆತ್ತಲಾಗಿದೆ.

ಮೇಲಿನ ಎಲ್ಲಾ ಅಂಶಗಳಿಂದಾಗಿ ಯಾದಗಿರಿಯ ಪರಿಸರವು ರಾಷ್ಟ್ರಕೂಟರ ಕಾಲದಲ್ಲಿ ಜೈನಧರ್ಮದ ಕೇಂದ್ರವಾಗಿತ್ತು ಎಂದೂ ತಿಳಿದುಬರುತ್ತದೆ.

**ಟೀಕಾಚಾರ್ಯ ದೇವಾಲಯದ ಮೂರ್ತಿಶಿಲ್ಪ:**

ಯರಗೋಳ ಗ್ರಾಮದ ಟೀಕಾಚಾರ್ಯ ದೇವಾಲಯದ ಪಕ್ಕದಲ್ಲಿ ಶಿವ ಮತ್ತು ಗಣಪತಿಯನ್ನೊಳಗೊಂಡ ೩ ಅಡಿ ಎತ್ತರದ ಮೂರ್ತಿ ಇದ್ದು, ಅದನ್ನು ಚಿಕ್ಕ ಮಂಟಪಾಕೃತಿಯ ಒಳಗೆ ನಿಲ್ಲಿಸಲಾಗಿದೆ. ಅದರ ಮೇಲೆ ಕಲ್ಲಿನ ಚಾಚಿದ ಛಾವಣಿಯಂತೆ ಮಾಡಲಾಗಿದೆ. ಈ ಮೂರ್ತಿಗಳು ಎಡದಿಂದ ಬಲಕ್ಕೆ ಶಿವ ಕೈಯಲ್ಲಿ ಖಡ್ಗ ಇನ್ನೊಂದು ಕೈಯಲ್ಲಿ ಶಂಖ ಹಿಡಿದಿರುವ ಅದರ ಕೆಳಗೆ ವಾಹನ ನಂದಿ ಇದೆ. ಎರಡನೇ ಸ್ತ್ರೀ ಚಿತ್ರದಲ್ಲಿ ಸಪ್ತ ಮಾತೃಕೆಯಲ್ಲಿ ಒಬ್ಬರಾದ ಬ್ರಾಹ್ಮಿ ಕೈಯಲ್ಲಿ ಗದೆ, ಶಂಖ, ಕೆಳಗಡೆ ವಾಹನ ನವಿಲು ಇದೆ. ನಂತರ ಮಾಹೇಶ್ವರಿ, ಕೈಯಲ್ಲಿ ಡಮರುಗ ಕೆಳಗಡೆ ವಾಹನ ನಂದಿ ಮತ್ತು ಕೌಮರಿ ಕೈಯಲ್ಲಿ ಶಂಖ, ವಾಹನ ನವಿಲು ನಂತರ ವೈಷ್ಣವಿ ಕೈಯಲ್ಲಿ ಶಂಖ ವಾಹನ ಆಂಜನೇಯ, ಚಾಮುಂಡಿ ಕೈಯಲ್ಲಿ ಶಂಖ, ವಾಹನ ನಂದಿ, ಇಂದ್ರಾಣಿ ಕೈಯಲ್ಲಿ ಶಂಖ ಗಧೆ ವಾಹನ ವರಾಹವಿದ್ದು ಕೊನೆಯಲ್ಲಿ ಮತ್ತೆ ಗಣಪತಿ ಮುಂತಾದ ಉಬ್ಬು ಶಿಲ್ಪಗಳಿಂದ ಶೋಭಾಯಮಾನವಾಗಿದೆ.

**ಮಲ್ಲಿಕಾರ್ಜುನ ಮೂರ್ತಿಶಿಲ್ಪ:**

ಶ್ರೀಶೈಲದಿಂದ ತಂದು ಸ್ಥಾಪಿಸಿರುವ ಈ ಮೂರ್ತಿಯು ದೇವಾಲಯದ ಗರ್ಭಗೃಹದಲ್ಲಿ

೪ ಅಡಿ ಎತ್ತರವಾಗಿದೆ. ಮಲ್ಲಿಕಾರ್ಜುನ ವಿಗ್ರಹವನ್ನು ಕಪ್ಪು ಕಡುಲೆಯಿಂದ ಕೆತ್ತಲಾಗಿದೆ ವಿಗ್ರಹದ ಮುಖದ ಭಾವ, ಕಣ್ಣು, ಮೂಗು, ಬಾಯಿ, ಕೆನ್ನೆಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ. ಮೂರ್ತಿಯ ಮೇಲುಗೈಯಲ್ಲಿ ಶಂಖ ಚಕ್ರಗಳಿದ್ದು ಅವನ್ನು ಕೈಗಳಲ್ಲಿರಿಸಿದ ಭಂಗಿ ಸಮರ್ಪಕವಾಗಿದೆ. ಮೇಲಿನ ಎರಡು ಕೈಗಳಿಗೆ ಹೋಲಿಸಿದರೆ ಕೆಳಗಿನ ಕೆತ್ತನೆಗಳು ಅಸಮ ಪ್ರಮಾಣದಲ್ಲಿ ಭುಜದ ಭಾಗದಲ್ಲಿ ಗುಂಗುರು ಕೂದಲಿನ ಉಂಗರಗಳು ಎರಡು ಭುಜಗಳಿಂದಲೂ ಇಳಿಬಿದ್ದಿರುವುದರಿಂದ ಕಾಣುವ ವಿಶೇಷ ಕೆತ್ತನೆಯಾಗಿದೆ.

**ಭುವನೇಶ್ವರಿ ದೇವಿ**

ಮಲ್ಲಿಕಾರ್ಜುನ ಮೂರ್ತಿಯ ಪಕ್ಕದಲ್ಲಿರುವ ಶ್ರೀ ಭುವನೇಶ್ವರಿ ದೇವಿಯ ಶಿಲ್ಪಿ ೩.೫ ಅಡಿ ಎತ್ತರವಾಗಿದೆ. ಇದಕ್ಕೆ ಉದ್ದವಾದ ಕಿರೀಟವಿದು. ಎರಡು ಕೈಗಳು ಮಾತ್ರ ಸ್ಪಷ್ಟವಾಗಿದ್ದು ಕಾಣುತ್ತದೆ. ಒಂದು ಕೈಯನ್ನು ಇಳಿಬಿಟ್ಟ ಮತ್ತೊಂದು ಕೈಯನ್ನು ಅರ್ಧಕ್ಕೆ ಮಡಿಸಿದಂತೆ ಕೆತ್ತಲಾಗಿದೆ. ಆದರೆ ಈ ಸ್ತ್ರೀ ವಿಗ್ರಹವು ಮುಖಭಾಗದಲ್ಲಿ ಸ್ಫುಟತೆಯಿಂದ ಕೂಡಿದ್ದು ಭಾವ ಕಣ್ಣು, ಮೂಗು ಬಾಯಿ ಆಕರ್ಷಕವಾಗಿ ಕೆತ್ತಲಾಗಿದೆ.

**ದ್ವಾರಪಾಲಕರು**

ಗರ್ಭಗೃಹದ ಹೊರಗಡೆ ಸುಖನಾಸಿಯ ದ್ವಾರದ ಎಡ ಮತ್ತು ಬಲ ಪಾರ್ಶ್ವಗಳ ನವರಂಗದ ಭಾಗದಲ್ಲಿ ದ್ವಾರದ ಇಕ್ಕೆಲುಗಳಿರುವ ಎರಡು ಕೋಷ್ಠಕಗಳಲ್ಲಿ ತ್ರಿಭಂಗದಲ್ಲಿರುವ ಸುಮಾರು ೪ ಅಡಿಗಳಷ್ಟು ಎತ್ತರದ ವೈಷ್ಣವ ದ್ವಾರಪಾಲಕರ ಉಬ್ಬು ಕೆತ್ತನೆ ವಿಗ್ರಹಗಳಿವೆ. ಅಗಲವಾಗಿ ಅರಳಿಸಿದ ಕಣ್ಣುಗಳಿಗೆ ಬಿಳಿ ಬಣ್ಣ ಲೇಪಿಸಿರುವುದರಿಂದ ಅದು ಮತ್ತಷ್ಟು ರೌದ್ರವಾಗಿ ಕಾಣುತ್ತೇವೆ. ದ್ವಾರಪಾಲಕರ ಮೇಲಿನ ಕೈಗಳಲ್ಲಿ ಶಂಖ ಮತ್ತು ಚಕ್ರಗಳಿವೆ. ಕೈಗಳಲ್ಲಿ ಒಂದರಲ್ಲಿ ಖಡ್ಗ ಮತ್ತೊಂದು ಕೈಯಲ್ಲಿ ವಸ್ತ್ರಾಭರಣಗಳನ್ನು ಶಿಲ್ಪದಲ್ಲಿಯ ಕಂಡರಿಸಲಾಗಿದೆ.

**ಹನುಮಂತ ಮೂರ್ತಿಶಿಲ್ಪ**

ಮಲ್ಲಿಕಾರ್ಜುನ ದೇವಾಲಯದ ಮೆಟ್ಟಿಲು ದಾರಿಯಲ್ಲಿ ಹನುಮಂತನ ಪುಟ್ಟಗುಡಿ ಇದೆ. ಬಂಡೆಗಳಲ್ಲಿನ ಉಬ್ಬು ಶಿಲ್ಪವಾಗಿ ಸಂಕೋಲೆ ಹನುಮಂತನೇ ಕೆತ್ತಲಾಗಿದೆ. ಆಗಾಗ್ಗೆ ಹನುಮಂತನಿಗೆ ಪೂಜೆಯ ಭಾಗ್ಯ ಸಿಗುತ್ತದೆ. ಎತ್ತರದಲ್ಲಿ ಈ ಮೂರ್ತಿಯ ೪ ಅಡಿಯಾಗಿದ್ದು ಇತನು ಒಂದು ಕೈಯಲ್ಲಿ ಗಜವನ್ನು ಹಿಡಿದಿರುವುದು ಮತ್ತು ಮತ್ತೊಂದು ಕೈಯಲ್ಲಿ ಗುಡ್ಡವನ್ನು ಎತ್ತಿರುವುದು ಈ ಚಿತ್ರದಲ್ಲಿ ಕಾಣುತ್ತೇವೆ. ಇತನ ಕೊರಳಲ್ಲಿ ಬೇರೆ ಬೇರೆ ಆಭರಣಗಳನ್ನು ಹಾಕಿಕೊಂಡಿದ್ದು ಆಕರ್ಷಕವಾಗಿ ಕಾಣುತ್ತೇವೆ.

**ಮಲ್ಲಿಕಾರ್ಜುನ ದೇವಾಲಯದ ಹೊರ ಮತ್ತು ಒಳಗಡೆಯ ಮೂರ್ತಿಶಿಲ್ಪಗಳು:**

ಗರ್ಭಗೃಹದ ಹೊರ ಮತ್ತು ಒಳಗಡೆ ಅನೇಕ ಅಸಂಖ್ಯಾ ಮೂರ್ತಿಗಳನ್ನು ಕೆತ್ತಲಾಗಿದೆ. ಒಳಭಾಗದಲ್ಲಿ ಮಲ್ಲಿಕಾರ್ಜುನ ಮತ್ತು ಭುವನೇಶ್ವರಿಯಿಂದ ಹಿಡಿದು ಎಲ್ಲಾ ಕಡೆ ತುಂಬಾ ಕೆತ್ತನೆಯ ಕೆಲಸವಾಗಿದೆ. ಒಳಗೋಡೆಯ ನಾಲ್ಕು ಪಟ್ಟಿಕೆಗಳಲ್ಲಿ ನೂರಾರು ವಿವಿಧ ಭಂಗಿಯ ದೇವತೆಗಳು ಯಕ್ಷ ಯಕ್ಷಿಣಿಯರ ಚಿತ್ರಗಳನ್ನು ವಿಶೇಷವಾಗಿ ಕಲ್ಯಾಣದ ಕ್ರಾಂತಿಯ ಉಬ್ಬು ಚಿತ್ರಗಳಿಂದ ಗಣಪತಿ ಲಿಂಗರಾಧನೆ ಅಶ್ವರೂಢ ಬಸವಣ್ಣನವರ ಪಕ್ಕದಲ್ಲಿ ಲಿಂಗ ಬೇಡರ ಕಣಪ್ಪ ಅಕ್ಕಮಹಾದೇವಿ ತಂಬೂರಿ ಹಿಡಿದಿರುವ ಅನೇಕ ಮೂರ್ತಿ ಶಿಲ್ಪಗಳು ಆಕರ್ಷಕವಾಗಿ ಕೆತ್ತಲಾಗಿದೆ. ದೇವಾಲಯದ ಹೊರಗೋಡೆಯ ಮೇಲೆ ದಕ್ಷಿಣಕ್ಕೆ ದಕ್ಷಬ್ರಹ್ಮನು ಮತ್ತು ಹತ್ತು ಮುಖಗಳು ರಾವಣ ಕೈಯಲ್ಲಿ ಲಿಂಗ ಹಿಡಿದು ಪೂಜಿಸುತ್ತಿರುವ ದಶಮುಖ ರಾವಣ ಆಂಜನೇಯ ಅಶ್ವಮುಖದ ಲಿಂಗಧಾರಿ ಆಂಜನೇಯ ಚತುರ್ಮುಖ ವಿಷ್ಣು, ತ್ರಿಮುಖ, ಬ್ರಹ್ಮ ಮತ್ತು ಬಸವಣ್ಣನ ಅನೇಕ ಮೂರ್ತಿ ಶಿಲ್ಪಗಳು ಈ ದೇವಾಲಯದ ಹೊರಗಡೆ ಮತ್ತು ಒಳಗಡೆ ಆಕರ್ಷಕವಾಗಿ ಕೆತ್ತಲಾಗಿದೆ.

**೩.೩. ಶಾಸನಗಳು**

ಒಂದು ಪ್ರದೇಶಗಳು ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯುವಲ್ಲಿ ಹಾಗೂ ನಿರ್ಮಿಸುವಲ್ಲಿ ಶಾಸನಗಳ ಪಾತ್ರ ಮಹತ್ವದ್ದು. ಇತಿಹಾಸದ ಪ್ರಮಾಣೀಭೂತವಾದ ಪುನರ್ ನಿರ್ಮಾಣಕ್ಕೆ ಇರುವ ಅತಿ ಪ್ರಮುಖವಾದ ಆಧಾರಗಳೆಂದರೆ ಶಾಸನಗಳು. ಕನ್ನಡ ಸಾಹಿತ್ಯ ಕಲಾಕೃತಿಗಳ ನಾಣ್ಯಗಳು ವಿದೇಶಿ ಯಾತ್ರಿಕರ ವರದಿಗಳು, ಭೂ ಉತ್ಖನನದಿಂದ ಹೊರಬಿದ್ದ ಅಂಶಗಳು ಇವೆಲ್ಲವೂ ಸಹಾಯಕವಾದರೂ ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯವಂತಹದ್ದು ಮುಖ್ಯವಾಗಿ ಶಾಸನಗಳಿಂದಲೇ ಇತರ ಆಧಾರಗಳು ತುಂಬಿಕೊಡಲಾರದ ಕೆಲವು ಅಂಶಗಳನ್ನು ಇಲ್ಲಿನ ಶಾಸನ ಸಂಪತ್ತು ಒದಗಿಸಿಕೊಟ್ಟಿತ್ತು."[೧೦] ಇಂತಹ ಶಾಸನಗಳನ್ನು ಶಿಲೆ, ಲೋಹ, ಮಡಿಕೆ ಮೊದಲಾದ ಗಟ್ಟಿಯಾದ ವಸ್ತುಗಳ ಮೇಲೆ ರಚಿಸಲಾಗಿದೆ. ಪ್ರಚಲಿತ ಕಾಲದಲ್ಲಿ ಶಾಸನ ಎಂಬ ಪದವು ಕಾನೂನು ಎಂಬ ಅರ್ಥ ನೀಡುವಂತಿದ್ದರೆ ಪ್ರಾಚೀನ ಕಾಲದಲ್ಲಿ ಆ ಪದ್ಯವು ರಾಜಾಜ್ಞೆಯಾಗಿತ್ತು. "ಶಾಸನವು ಸಂಸ್ಕೃತದ ಶಾಸ ಎಂಬ ಧಾತುವಿನಿಂದ ಬಂದಿದೆ. ಅಂದರೆ ಘೋಷಣೆ ಹೊರಡಿಸು ಎಂಬ ಅರ್ಥವನ್ನು ಕೊಡುತ್ತದೆ."[೧೧] ಇಂತಹ ಶಾಸನಗಳಲ್ಲಿ ಶಿಲಾ ಶಾಸನಗಳು, ತಾಮ್ರ ಶಾಸನಗಳು ಪ್ರಮುಖವಾಗಿ ಅವುಗಳ ಜೊತೆಗೆ ಕರೆಯುತ್ತಾರೆ. ಶಾಸನಗಳು ದೇವಾಲಯಗಳಲ್ಲಿ ಮಠಮಾನ್ಯಗಳಲ್ಲಿ ಅಗ್ರಹಾರಗಳಲ್ಲಿ ಬ್ರಾಹ್ಮಣರು ಪುರೋಹಿತರಿಗೆ ದಾನಗಳನ್ನು ನೀಡುತ್ತಿದ್ದ ಅವುಗಳ ಸಾಕ್ಷಿಯಾಗಿ ಮುಖಂಡರಿಂದ ಬರಸಿರುವ

ಶಾಸನಗಳನ್ನು ಹಾಕಿಸುತ್ತಿದ್ದರು. ದಾನ, ಧರ್ಮಗಳು ಶಾಸನಗಳ ಪ್ರೇರಕ ಶಕ್ತಿಯಾದರಿಂದಲೇ ದಾನ ಶಾಸನಗಳ ಸಂಖ್ಯೆ ಹೆಚ್ಚಾಯಿತು."[೮] ಒಟ್ಟಾರೆ ದೇವಾಲಯಗಳಿಗೆ, ಮಠಗಳಿಗೆ, ವಿದ್ವಾಂಸರಿಗೆ, ಗುರುಗಳಿಗೆ ಹೊಲವನ್ನು, ಹಣವನ್ನು ಆದಾಯದ ಭಾಗವನ್ನು ಬಿಟ್ಟುಕೊಟ್ಟ ವಿಷಯ ರೂಪಿಸುವುದೇ ದಾನ ಶಾಸನಗಳ ಉದ್ದೇಶ."[೯]

ಶಾಸನಗಳಲ್ಲಿ ಬರುವ ವಿಷಯವನ್ನು ರಾಜಕೀಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ಕಲೆ ಮತ್ತು ವಾಸ್ತುಶಿಲ್ಪ ಸಾಹಿತ್ಯ ಮೊದಲಾದ ಭಾಗಗಳಾಗಿ ವಿಂಗಡಿಸಬಹುದು. ಚರಿತ್ರೆಯ ರಚನೆಗೆ ಶಾಸನಗಳು ಮುಖ್ಯ ಆಕಾರಗಳೆಂದು ವಿಸ್ತೃತವಾಗಿ ಅಧ್ಯಯನಗಳು ನಡೆದಿವೆ. ಆರಂಭದಲ್ಲಿ ರಾಜ್ಯಕ್ಕೆ ಇಲ್ಲವೇ ಭೌಗೋಳಿಕ ಪ್ರದೇಶಕ್ಕೆ ಸಂಬಂಧಿಸಿದ್ದಾಗಿದ್ದು ಕ್ರಮೇಣ ಇದು ಒಂದು ಪ್ರದೇಶ ಘಟಕ ಹಳ್ಳಿಗಳಿಗೂ ಸೀಮಿತವಾಗಿ ಇವುಗಳೊಂದಿಗೆ ಅಲ್ಲಿ ಕಂಡುಬರುವ ವಿವಿಧ ಆಕರಗಳನ್ನು ಬಳಸಿ ಇತಿಹಾಸ ನಿರ್ಮಿಸಲು ಸಾಧ್ಯವಾಯಿತು.

ಯಾದಗಿರಿ ಪರಿಸರವು ಪ್ರಾಚೀನ ಆಡಳಿತ ಮಾಡಿದ ಮನೆತನಗಳಾದ ಕೆಲವು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಕಲ್ಯಾಣಿ ಚಾಲುಕ್ಯರ ದೊರೆಗಳ ಆಳ್ವಿಕೆಯಲ್ಲಿ ರಾಜಧಾನಿಯಾಗಿದ್ದು, ಮುಂದೆ ೬ನೆಯ ವಿಕ್ರಾಮಾಧಿತ್ಯ ಆಳ್ವಿಕೆಯಲ್ಲಿ ಈ ಪರಿಸರದ ಸುತ್ತಲೂ ಗ್ರಾಮಗಳಿಂದ ಅನಪೂರ ಇಡ್ಲೋಲ್ ಹೊಡಗಮದ್ರಿ ಬೇಳಗುಂದಿ ಯರಗೋಳ ಮತ್ತು ಎಲೇರಿ ಗಿರಿದುರ್ಗದ ಮೇಲಿನ ಶಾಸನಗಳು ಕಲ್ಯಾಣಿ ಚಾಲುಕ್ಯರ ಕಾಲದವೆಂದು ಕಂಡುಬರುತ್ತವೆ.

ಈ ಪರಿಸರದ ಪ್ರಚ್ಯಾವಶೇಷಗಳು ಶಾಸನಗಳು ಪರಿವೀಕ್ಷಣೆ, ಪ್ರಕಟಣೆಗಳು ಇದುವರೆಗೆ ನಡೆದಿಲ್ಲ. ಹೀಗಿದ್ದೂ ಈ ತಾಲ್ಲೂಕಿಗೆ ಶಾಸನತಜ್ಞರು ಗುರುತಿಸಿದ ಶಾಸನಗಳ ಸಂಖ್ಯೆ ೬. ಆದರೆ ಪ್ರಕಟಿತ ಶಾಸನಗಳು ಕೇವಲ ಒಂದೆ. ಒಂದು ಅದನ್ನು ಸುಮಾರು ೪೦ ವರ್ಷಗಳ ಹಿಂದೆ ಡಾ. ಪಿ.ಬಿ.ದೇಸಾಯಿ ಅವರಿಂದ ಎಪಿಜಿಎಚಿ–೩ರಲ್ಲಿ ಪ್ರಕಟಣೆಗೊಂಡಿರುವ ವೆಂಕಸಮುದ್ರ ಶಾಸನ ಮಾತ್ರ ಮತ್ತು ಹನುಮಾಕ್ಷಿ ಗೋಗಿಯವರು, ಈ ಪರಿಸರದಲ್ಲಿ ಒಟ್ಟು ೧೪ ಶಾಸನಗಳು, ಅಪ್ರಕಟಿತವಾಗಿ ಗುರುತಿಸಿದ್ದಾರೆ.

ಏತಗಿರಿ ಶಾಸನ– ಯಾದಗಿರಿಯ ಗಿರಿದುರ್ಗದ ಮಲ್ಲೆ ಪಶ್ಚಿಭಿಮುಖವಾಗಿರುವ ಈ ಶಾಸನವನ್ನು ಕಲ್ಲಿನ ಮೇಲೆ ಕೊರೆಯಲಾಗಿದೆ. ಸುಮಾರು ೨.೫ ಅಗಲ, ೩.೫ ಎತ್ತರದ ಕರಿಕಲ್ಲಿನ ಮೇಲೆ ಕೆತ್ತಿದ ಶಾಸನವಿದಾಗಿದ್ದು ಮೇಲಿನ ೮ ಭಾಗದಲ್ಲಿ ಸೂರ್ಯ, ಶಿವಲಿಂಗ, ಚಂದ್ರರನ್ನು ಅವುಗಳ ಕೆಳಗಡೆ ನದಿ, ಆಕಳು, ಚಿತ್ರಗಳು ಕಂಡುಬರುತ್ತವೆ.

ಕಲ್ಯಾಣಿ ಚಾಲುಕ್ಯರ ಚಕ್ರವರ್ತಿ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯ ಕಲ್ಯಾಣಪುರದ ರಾಜಧಾನಿಯಿಂದ ಆಳುತ್ತಿದ್ದಾಗ ಅವನ ಪಿರಿಯರಸಿ ಚಂದಲದೇವಿಯರ್ ಮಗನಾದ ಜಗದೇಕಮಲ್ಲ

ಕುಮಾರ ಸತ್ಯಾಶ್ರಯದೇವರು ಮಹಾಮಂಡಲೇಶ್ವರನಾಗಿ ರಾಜ್ಯಭಾರ ಮಾಡುತ್ತಿದ್ದನಂತೆ. ಆಗ ಕಲ್ಲಕೆಗಳು ನಾಡಿನ ರಾಜಧಾನಿಯಾದ ಉಜ್ಜಿಗವೊಳಲಿನ ಆನೆಮೇಶ್ವರ ದೇವರ ಪೂಜೆ-ಮನಸ್ಕಾರಗಳಿಗಾಗಿ ಅಲ್ಲಿಯ ಆಚಾರ್ಯ ದಿವ್ಯಶಕ್ತಿ ಪಂಡಿತರ ಕಾಲ್ತೊಳೆದು ಬಿಟ್ಟ ಭೂದತ್ತಿ ಕರೆ ದೇವರ ಕೇರಿಗಳನ್ನು ತಿಳಿಸುತ್ತದೆ. ನಂತರ ದಿವ್ಯಶಕ್ತಿ ಪಂಡಿತರ ಗುರುಪರಂಪರೆಯನ್ನು ಸಂಸ್ಕೃತದಲ್ಲಿ ವಿವರಿಸುತ್ತದೆ. ತದನಂತರ ಸಂಸ್ಕೃತ ಫಲಶ್ರುತಿ ಶ್ಲೋಕಗಳಿವೆ."[೧೪]

ಶಾಸನದಲ್ಲಿಯ ಮೊದಲ ಭಾಗದ ಮಿತಿಯನ್ನು ೧೦ ರಿಂದ ೧೨ನೆಯ ಸಾಲುಗಳಲ್ಲಿ ಶ್ರೀಮುಚ್ಚಳುಕ್ಯ ವಿಕ್ರಮವರ್ಷದ ೩೨ನೆಯ ಸರ್ವ್ವಜತ್ಯವತ್ನರೆದ ಮಾರ್ಗ್ಗಶಿರದಮಾವಾಸ್ಯೆ ಸೋಮವಾರದಿಂದಿನ ಸೂರ್ಯಗ್ರಹಣ ಎಂದೂ ತಿಳಿಸುತ್ತದೆ. ಇದು ಕ್ರಿ.ಶ. ೧೬ ಡಿಸೆಂಬರ್ ೧೧೦೭ಕ್ಕೆ ಹೊಂದುತ್ತದೆ. ಅಂದು ಸೂರ್ಯ ಗ್ರಹಣವು ಇತ್ತು. ಆದರೆ ೨೪ನೆಯ ಸಾಲಿನಲ್ಲಿ ಇನ್ನೊಂದು ದತ್ತಿಯ ವಿವರಗಳಿದ್ದು ಮಹಾಪ್ರಧಾನ ದಂಡನಾಯಕ ಪೋತರಸರು ಕಲ್ಲುಕೆಳಗು ನಾಡ ಮೊದಲ ಬಾಡ ರಾಜಧಾನಿ ಉಜ್ಜಿಗವೊಳಲತಿ ಪಂಡಿತ ದೇವರ ಕಾಲ್ತೊಳೆದು ಬಿಟ್ಟ ನೂರು ಮತ್ತರು ಭೂದತ್ತಿಯನ್ನು ತಿಳಿಸುತ್ತದೆ. ಮಿತಿಯನ್ನು ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ೩೧ನೆಯ ನಂದರ ಸಂವತ್ಸರದ ಚೈತ್ರಮಾವಾಸ್ಯೆ ಸೋಮವಾರದಿಂದನ ಸೂರ್ಯ ಗ್ರಹಣ ಎಂದೂ ನೀಡುತ್ತದೆ. ಇದು ೨೯ ಮಾರ್ಚ್ ೧೧೧೩ರ ಶುಕ್ರವಾರವಾಗಿತ್ತು ಎಂದೂ ಉಲ್ಲೇಖವಾಗಿದೆ.

**ಹೆಡಗಿಮದ್ರಿ ಶಾಸನ:** ಯಾದಗಿರಿ ತಾಲ್ಲೂಕು ಕೇಂದ್ರದಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಹೆಡಗಮದ್ರಿ ಪ್ರಾಚೀನ ಅವಶೇಷಗಳು ಯಾವುವು? ಆದರೆ ಕೇವಲ ೫ ಕಿ.ಮೀ.ಗಳ ಅಂತರದಲ್ಲಿ ಕನಗನಹಳ್ಳಿ ಎಂಬ ಗ್ರಾಮದಿಂದ ಸನ್ನತಿಯು ಕೇವಲ ೧೦ ಕಿ.ಮೀ. ಅಂತರವಾಗುತ್ತದೆ. ಆದ್ದರಿಂದ ಈ ಶಾಸನವು ಸನ್ನತಿಯಿಂದ ಸ್ಥಳಾಂತರವಾಯಿತು ಎಂದೂ ತಿಳಿದುಬರುತ್ತದೆ.

ಈ ಶಾಸನವು ೫.೫ ಎತ್ತರ ೧.೫. ಅಗಲದ ಕಂಕಲ್ಲಿನಲ್ಲಿ ಕೆತ್ತಲಾಗಿದ್ದು ಮೇಲ್ಭಾಗದಲ್ಲಿ ಚಂದ್ರ ಸೂರ್ಯ, ಶಿವಲಿಂಗ, ಖಡ್ಗ, ಆಕಳಿನ ಉಬ್ಬು ಶಿಲ್ಪಗಳಿವೆ. ಶಾಸನದ ೩೧ನೆಯ ಸಾಲುಗಳವರೆಗೆ ಚಿಕ್ಕ ಚಿಕ್ಕ ಅಕ್ಷರಗಳಿದ್ದು ಈ ಭಾಗ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಯಸಿಂಗ ದೇವನ ಕಾಲದ್ದಾಗಿದ್ದರೆ, ೨೧ನೆಯ ಸಾಲಿನಿಂದ ದೊಡ್ಡ ಅಕ್ಷರಗಳಲ್ಲಿ ಇನ್ನೊಂದು ಶಾಸನವನ್ನು ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯನು ಮಗನೂ ಯುವರಾಜನೂ ಆಗಿದ್ದ ಮಲ್ಲಿಕಾರ್ಜುನದೇವನ ಕಾಲದಲ್ಲಿ ಬರೆಯಲಾಗಿದೆ.

ಮೊದಲ ಭಾಗದಲ್ಲಿ ಹೈಹಯ ವಂಶದ ಮಹಾಮಂಡಲೇಶ್ವರ ದೇವರಸರು ಆಳುತ್ತಿರುವಾಗ ಕೊಲ್ಲೂರು ಸಿದ್ದೇಶ್ವರಮಠದ ಪ್ರಮದನ ಪಂಡಿತರು ಕಾಲ್ತೊಳೆದು ಬುದ್ದರೆಯಲ್ಲಿನ ಭೋಧೇಶ್ವರ ದೇವರಿಗೆ ಕೊಲ್ಲೂರು ಮತ್ತು ಕವಿಗೆಟ್ಟೆಗಳಲ್ಲಿ ಬಿಟ್ಟ ಭೂದತ್ತಿಯನ್ನು ಕುರಿತು ಹೇಳಲಾಗಿದೆ. ಶಾಶನದ ೭ನೆಯ ಸಾಲಿನಲ್ಲಿ ಬರುವ ಸಕವರ್ಷ ೯೫೫ನೆಯ ಶ್ರೀಮುಖ ಸಂವತ್ಸರ ಉತ್ತರಾಣ ಸಂಕ್ರಾನ್ತಿ ಅಮವಾಸ್ಯೆ ಸೋಮವಾರದಂದು ಎನ್ನುವ ಮಿತಿಯು ಸ್ವಾಮಿ ಕಣ್ಣಪಿಳ್ಳೆಯವರದು ಎಂದೂ ಸರಿಹೊಂದಿದೆ. ೩ನೆಯ ಭಾಗದಲ್ಲಿ ಮಲ್ಲಿಕಾರ್ಜುನ ದೇವರಿಗೆ ಮುಜೆಯ ನಾಯಕ ಭಿನ್ನವಾಗಿಸಿಕೊಂಡು ನಾಲ್ಕು ಲಿಂಗಗಳನ್ನು ಪ್ರತಿಷ್ಠಾಪಿಸಿ ಮಲ್ಲಿಕಾರ್ಜುನದೇವರ ನೈವೇಧ್ಯಕ್ಕಾಗಿ ಮತ್ತು ಕಲ್ಲು ಕುಟಿಗರಿಗೆ ನೀಡಿದ ಭೂದತ್ತಿಯನ್ನು ವಿವರಿಸಲಾಗಿದೆ."[೫]

ಯರಗೋಳ ಶಾಸನ– ಯಾದಗಿರಿ ಪರಿಸರದಿಂದ ಕಲಬುರ್ಗಿಯ ರಸ್ತೆಗೆ, ಬರುವ ಸುಮಾರ ೧೮ ಕಿ.ಮೀ. ಅಂತರದಲ್ಲಿರುವ ಈ ಗ್ರಾಮವು ಕಲ್ಯಾಣಿ ಚಾಲುಕ್ಯರ, ಆಳ್ವಿಕೆಯಲ್ಲಿ ಟೀಕಾಚಾರ್ಯರ, ಆಶ್ರಮ ಸ್ಥಳವಾಗಿತ್ತು. ಯರಗೋಳ ಗುಡ್ಡದಲ್ಲಿ ಬಂಡೆಗಳ ಮೇಲೆ ಈ ಶಾಸವನ್ನು ಕೆತ್ತಲಾಗಿದೆ. ೩ ಅಗಲ ೧.೫ ಎತ್ತರದಲ್ಲಿ ಇದು ಉದ್ದದಲ್ಲಿ ೧೩ x ೨ ಅಡಿ ಅಗಲವಾಗಿದೆ. ಶಾಸನವನ್ನು ಕೆತ್ತಲಾಗಿದ್ದು ಅಕ್ಷರಗಳು ೩ ರಿಂದ ೩.೫ ಗಾತ್ರದ್ದಾಗಿವೆ. ಬೆಣಚುಕಲ್ಲಿನ ಕಗ್ಗಲ್ಲಿನ ಮೇಲೆ ಶಾಸನ ಕೆತ್ತಿದ್ದರೂ ಅಕ್ಷರಗಳು ಸುಂದರವಾಗಿವೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರೈಲೊಕಮಲ್ಲ ೧ನೆಯ ಸೋಮೇಶ್ವರ ಆಳುತ್ತಿರುವಾಗ ಎರಗೋಳದ ಉಭಯಸಾಮ್ಯನನ್ನು ಮಾಚಯನಾಯಕ ಪಾಲಿಸುತ್ತಿರುವಾಗ ಕೆರೆಯ ಏರಿಯಲ್ಲವ ಸಿದ್ದೇಶ್ವರ ದೇವರಿಗೆ ಬಿಟ್ಟ ಭೂದತ್ತಿಯನ್ನು ತಿಳಿಸುತ್ತದೆ. ಶಾಸನವು ೩–೪ನೆಯ ಸಾಲುಗಳಲ್ಲಿ ಬರುವ ಶಕವರುಷ ೯೮೦ನೆಯ ವಿಳಾದಿ ಸಂವತ್ಸರದ ಉತ್ತರಾಯಣ ಸಂಕ್ರಮಣ ಎನ್ನುವ ಮಿತಿಯು ಕ್ರಿ.ಶ. ೧೦೫೯ರ ಜನವರಿ ದಿನಾಂಕದ ಕುರಿತು ವಿವರಗಳಿಲ್ಲದುದರಿಂದ ಖಚಿತವಾಗಿ ಹೇಳಲು ಬರುವುದಿಲ್ಲ. ಶಾಸನದಿಂದ ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವದ ಅವಶೇಷಗಳು ತಿಳಿದುಕೊಳ್ಳಲು ಸಹಾಯಕವಾಗಿವೆ.

**ಅಡಿಟಿಪ್ಪಣಿಗಳು:**

೧. ಅಪೂರ್ಣ ಕೂ.ಸ. ದೇವಾಲಯ, ವಾಸ್ತುಶಿಲ್ಪ ಪರಿಚಯ, ೨೦೦೧, ಪುಟ–೦೮.

೨. ಅದೆ, ಪುಟ–೧೧

೩. ಕ್ಷೇತ್ರಕಾರ್ಯ ಸಂದರ್ಶನ, ಸ್ವಾಮಿ ರಘುನಾಥಚಾರ್ಯ (೬೦) ಯಾದಗಿರಿ.

೪. ಅಪೂರ್ಣ ಕೂ.ಸ.ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ–೯೫.

೫. ಸಿದ್ದಯ್ಯ ಕಲಾಲ; ಯಾದಗಿರಿ ದೇವಾಲಯ ಲೇಖನ, ಪುಟ–೩೦

೬. ಮಹಾದೇವಪ್ಪ ಎಂ. ಪಾಟೀಲ; ಶ್ರೀ ಮೈಲಾರಲಿಂಗನ ಮಹಿಮೆ; ಪುಟ-೧೫

೭. ಸಿದ್ದಯ್ಯ ಪುರಾಣಿಕ; ತ್ರಿಭುವನಮಲ್ಲ ಐತಿಹಾಸಿಕ ಕಾದಂಬರಿ, ಪುಟ-೧೫೦

೮. ಸಿದ್ದಯ್ಯ ಕಲಾಲ; ಯಾದಗಿರಿ ದೇವಾಲಯ ಲೇಖನ, ಪುಟ-೨೮.

೯. ಅಪೂರ್ಣ ಕೂ.ಸ.ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ-೪೬-೪೭.

೧೦. ತಿಪ್ಪೇರುದ್ರಸ್ವಾಮಿ ಹೆಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೮೬; ೨೩೩

೧೧. ಅದೇ, ಪುಟ-೨೩೫.

೧೨. ಕೃಷ್ಣಕುಮಾರ ಸಿ.ಪಿ, ಶಾಸನ ಪ್ರವೇಶ, ಪುಟ-೫೬.

೧೩. ಚಿದಾನಂದ ಮೂರ್ತಿ ಎಂ; ಕನ್ನಡ ಶಾಸನ ಸಾಂಸ್ಕೃತಿಕ ಅಧ್ಯಯನ, ಪುಟ-೭೫.

೧೪. ಹನುಮಾಕ್ಷಿ ಗೋಗಿ, ಅನುಶಾಸನ ೨೦೦೨, ಪುಟ-೨೪೫.

೧೫. ಹನುಮಾಕ್ಷಿ ಗೋಗಿ, ಅನುಶಾಸನ ೨೦೦೨, ಪುಟ-೨೮೫.

## ರಕ್ಷಣಾ ವಾಸ್ತು ಶಿಲ್ಪ ಮತ್ತು ನೀರಾವರಿ ವ್ಯವಸ್ಥೆ

### ೪.೧. ಕೋಟೆಗಳು

ಸಪ್ತಾಂಗಗಳಲ್ಲಿ ಒಂದಾದ ಕೋಟೆಯ ಅಧ್ಯಯನಕ್ಕೆ ಮೌಖಿಕ ಆಕರಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಅದರಲ್ಲೂ ಜಾನಪದ ಹಾಗೂ ಐತಿಹ್ಯಗಳಿಗೆ ಸಂಬಂಧಿಸಿದ ಕೃತಿಗಳನ್ನು ಪರಿಶೀಲಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳು. ಡಾ. ಎ. ಸುಬ್ಬಣ್ಣ ರೈ ಅವರ ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು (೧೯೯೪), ಡಾ. ಪುರುಷೋತ್ತಮ ಬಿಳಿಮಲೆ, ಡಾ. ಚಲುವರಾಜು ಅವರ ಹಂಪಿ ಜಾನಪದ (೧೯೯೬), ಇತ್ಯಾದಿ ಪುರಾತತ್ವ ಮತ್ತು ಇತಿಹಾಸ ನೆಲೆಗಟ್ಟಿನಲ್ಲಿ ಕೋಟೆ ಕಂಡು ಬರುತ್ತದೆ. ಇಂಥ ಕೋಟೆಗಳ ಕುರಿತು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಇದುವರೆಗೆ ಈ ಪರಿಸರದ ಕೋಟೆಯನ್ನು ಕುರಿತು ಚನ್ನಬಸಪ್ಪ, ಎಸ್. ಪಾಟೀಲ್ ಅವರು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ (೧೯೮೯). ಆದರೆ ಕೋಟೆಗಳ ಕುರಿತು ಸಮಗ್ರವಾಗಿ ಅಧ್ಯಯನ ಇನ್ನೂ ಮಾಡಬೇಕಾಗಿದೆ.

ಪ್ರಾಚೀನ ಕರ್ನಾಟಕದ ಅರಸು ಮನೆತನಗಳನ್ನು ನೋಡಿದಾಗ ತಮ್ಮ ರಾಜಧಾನಿಯ ಸುತ್ತುವರಿದು ಕೋಟೆಗಳನ್ನು ಕಟ್ಟುತ್ತಿದ್ದರು. ಏಕೆಂದರೆ ತಮ್ಮ ಸಾಮ್ರಾಜ್ಯದ ರಕ್ಷಣೆಗೋಸ್ಕರ ಈ ರೀತಿಯ ಕೋಟೆಯನ್ನು ನಿರ್ಮಿಸುತ್ತಿದ್ದರು.

"ಪ್ರಾಚೀನ ಸಾಹಿತ್ಯ ಕೃತಿಗಳಾದ ಕೌಟಿಲ್ಯನ ಅರ್ಥಶಾಸ್ತ್ರ ಕಾಮುಂದಕನ ನೀತಿಶಾಸ್ತ್ರ, ಶುಕ್ರ ನೀತಿಸಾರ, ಮನುಧರ್ಮಶಾಸ್ತ್ರಗಳಲ್ಲಿ ಕೋಟೆಗಳ ಮಹತ್ವವನ್ನು ವಿವರಿಸಲಾಗಿದೆ. ಪ್ರಾಚೀನ ರಾಜನೀತಿಜ್ಞರಿಂದ ನಮೂದಿಸಲ್ಪಟ್ಟಿರುವ ರಾಜ್ಯದ ಏಳು ಮೂಲ ಅಂಶಗಳ ಅಥವಾ ಸಪ್ತಾಂಗಗಳು ಯಾವುವೆಂದರೆ ಪ್ರಭು ಅಮರ್ತಾ (ಮಂತ್ರಿ), ರಾಷ್ಟ್ರ (ಜನಪದ ಸಂಸ್ಥಾನ), ದುರ್ಗ (ಕೋಟೆ), ಕೋಶ (ಜಖಾನೆ), ದಂಡ (ಸೈನ್ಯ) ಮತ್ತು ಮಿತ್ರರಾಜ್ಯ ರಾಜ್ಯವನ್ನು ಸ್ಥಾಪಿಸಲು ತಿಳಿಸಲ್ಪಟ್ಟಿರುವ ಈ ಸಪ್ತ ಮೂಲತತ್ವಗಳಲ್ಲಿ ದುರ್ಗ (ಕೋಟೆ) ಬಹುಮುಖ್ಯವೆಂದು ಪರಿಗಣಿಸಲಾಗಿದೆ. ಏಕೆಂದರೆ ಕೋಟೆ ರಾಜ್ಯ ರಕ್ಷಣಾ ವ್ಯವಸ್ಥೆಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ.

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ರಾಜನು ತನ್ನ ರಾಜ್ಯದ ಗಡಿಯ ನಾಲ್ಕು ದಿಕ್ಕುಗಳಲ್ಲೂ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಗಳನ್ನು ಕಟ್ಟಬೇಕೆಂದು ಹೇಳಿದ್ದಾನೆ. ಒಬ್ಬ ಬಿಲ್ಲುಗಾರ ಕೋಟೆ ಗೋಡೆಯನ್ನು ಕಟ್ಟಬೇಕೆಂದು ಹೇಳಿದ್ದಾನೆ. ಕೋಟೆ ಗೋಡೆಯ ಮೆರೆ(ರಕ್ಷಣೆ)ಯಲ್ಲಿ ನೂರಾರು ಶತ್ರುಗಳೊಂದಿಗೆ ಹೋರಾಡಬಹುದು ಮತ್ತು ನೂರಾರು ಬಿಲ್ಲುಗಾರರು ಹತ್ತು ಸಾವಿರ ಶತ್ರುಗಳೊಂದಿಗೆ ಹೋರಾಡಬಹುದು ಎಂದು ಹೇಳುತ್ತಾ ಮನುಕೋಟೆಗಳನ್ನು ಕಟ್ಟುವುದನ್ನು ಸಮರ್ಥಿಸಿದ್ದಾನೆ. ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ಯುದ್ಧದಲ್ಲಿ ನಿರ್ವಹಿಸಲಾಗದ ಕಾರ್ಯವನ್ನು ಒಬ್ಬ ರಾಜ ಕೋಟೆಯ ಸಹಾಯದಿಂದ ಆಶ್ಚರ್ಯಕರವಾಗಿ ನಿರ್ವಹಿಸಬಲ್ಲನು ಎಂದೂ ಪಂಚತಂತ್ರದಲ್ಲಿ ದೃಢವಾಗಿ ಹೇಳಲ್ಪಟ್ಟಿದೆ.

ಶುಕ್ರ ನೀತಿಯಲ್ಲಿ ಅನೇಕ ರೀತಿಯ ಗಿಡ ಮರಗಳು ಪೊದರುಗಳಿಂದ ಕೂಡಿದ ದನ-ಕರುಗಳು ಹಕ್ಕಿಗಳು ಮತ್ತಿತರ ಪ್ರಾಣಿಗಳಿಂದ ಸಮೃದ್ಧವಾಗಿರುವ ಧಾನ್ಯ ಸಮೃದ್ಧಿ ಇರುವ ಬೆಟ್ಟ-ನೀರುಗಳಿಂದ ಅವೃತವಾಗಿರುವ ಪ್ರದೇಶಗಳಲ್ಲಿ ಕೋಟೆಗಳನ್ನು ನಿರ್ಮಿಸಬೇಕು ಎಂದಿದೆ. ಅಂದರೆ ಕೋಟೆಯನ್ನು ಕಟ್ಟುವ ಸ್ತಳದ ಆಯ್ಕೆಯ ಬಗ್ಗೆ ಇಲ್ಲಿ ವಿವರವಿದೆ. ಕಾಮುಂದಕನ ನೀತಿಸಾರವಲ್ಲಿ ಭದ್ರವಾಗಿ ಕೋಟೇ ಇಲ್ಲದ ರಾಜ ಬಿರುಗಾಳಿಗೆ ಸಿಕ್ಕಿದ ಮೋಡದ ತುಣುಕುಗಳಿಗೆ ಸಮಾನ ಎಂದು ಡಾ. ಕೊಟ್ರೇಶ ಎಂ. ಅವರ (೨೦೦೨-೧೮-೧೯) ಅಭಿಪ್ರಾಯ."[೧]

"ಕೋಟೆಯನ್ನು ಕುರಿತು ಈ ರೀತಿಯಲ್ಲಿ ಐತಿಹ್ಯ ಬಂದಿದೆ. ಒಂದು ದಿನ ರಾಜನು ಬೇಟೆಯಾಡಲೆಂದು ತನ್ನ ಸೇನಾ ಸಮೇತವಾಗಿ ಕಾಡಿಗೆ ಹೊರಟನಂತೆ. ಬೇಟೆಗಾಗಿ ಗುಡ್ಡ ಬೆಟ್ಟ ಕಾಡನ್ನೆಲ್ಲ ಸುತ್ತಾಡಿದರೂ ಬೇಟೆಯೇ ಸಿಗಲಿಲ್ಲವಂತೆ ಇದರಿಂದ ದೂರದಲ್ಲಿ ಮೊಲವು ನಾಯಿಯನ್ನು ಬೆನ್ನಟ್ಟಿಕೊಂಡು ಹೋಗುತ್ತಿರುವುದನ್ನು ಇವನು ಕಂಡ ಅರಸನು ಈ ನೆಲವು ವೀರತ್ವದ ಗುಣವನ್ನು ಹೊಂದಿದೆ ಎಂಬ ಜನಪ್ರಿಯ ಮಾತುಗಳು ಪ್ರಚಲಿತದಲ್ಲಿವೆ. ವೀರತ್ವ ಹೊಂದಿರುವ ನೆಲದಲ್ಲಿ ಕೋಟೆಯನ್ನು ನಿರ್ಮಿಸುವುದರಿಂದ ಅದು ಸುಲಭವಾಗಿ ಯಾವ ಶತ್ರುವಿನಿಂದಲೂ ಸೋಲಿಸಲಾಗದ ಸಾಮ್ರಾಜ್ಯ ಸ್ಥಾಪನೆಗೆ ಕಾರಣವಾಗುತ್ತೆಂದು ನಂಬಲಾಗಿದೆ. ಈ ನಂಬಿಕೆಯೇ ಯಾದಗಿರಿ ಪರಿಸರದ ಕೋಟೆಯ ಸ್ಥಾಪನೆಗೆ ಕಾರಣವಾಗಿದೆ. ಅಲ್ಲದೆ ಈ ಪ್ರದೇಶವು ಮಹಾಪುರುಷರು ಓಡಾಡಿದ ಸ್ಥಳವಾಗಿದ್ದು ಇದೊಂದು ಪುಣ್ಯಭೂಮಿಯಾಗಿದೆ ಎಂದು ಕೋಟೆಯ ಸುತ್ತಮುತ್ತಲಿನ ಜನಪದರ ನಂಬಿಕೆಯಾಗಿದೆ. ಈ ತರಹದ ಘಟನೆಗಳು ಒಂದು ಕೋಟೆ ಅಥವಾ ಸಾಮ್ರಾಜ್ಯದ ಸ್ಥಾಪನೆಗೆ ಈ ರೀತಿಯಲ್ಲಿ ಘಟನಾವಳಿಗಳಿಂದ ಘಟನಾಶಕ್ತಿ ರಾಜಕೀಯ ಮುತ್ಸದ್ಧಿತನ ಮತ್ತು ಶೌರ್ಯ ಮುಂತಾದವು ಮುಖ್ಯವಾಗಿರುತ್ತವೆ. ಈ ರೀತಿಯ ಐತಿಹ್ಯವನ್ನು ಯಾದಗಿರಿ ಪರಿಸರದ ಕೋಟೆ ಹೊಂದಿದೆ."[೨]

ಒಂದು ಕೋಟೆಯಾಗಲಿ, ಸಾಮ್ರಾಜ್ಯವಾಗಲಿ ಸ್ಥಾಪನೆಯಾಗಬೇಕಾದರೆ ಅಲ್ಲಿನ ಭೌಗೋಳಿಕವು ವಿಶೇಷ ಪ್ರಾಶಸ್ತ್ಯವನ್ನು ಹೊಂದಿರಬೇಕು. ಮೊದಲಿಗೆ ಅದು ವೀರಭೂಮಿ ಗಂಡು ಭೂಮಿ ಆಗಿರಬೇಕು. ಇವರೆಡು ಸರಿ ಎಂದೂ ಭಾವಿಸಿದಲ್ಲಿ ಸಾಮ್ರಾಜ್ಯ ಸ್ಥಾಪಿಸಿ ಕೋಟೆ ನಿರ್ಮಿಸುವುದು”[೩] ಎಂದು ಡಾ. ಕೊಟ್ರೇಶ್ ಎಂ. ಅವರ ಅಭಿಪ್ರಾಯಪಟ್ಟಿದ್ದಾರೆ. ಕೋಟೆಗಳ ನಿರ್ಮಾಣದ ಪೂರ್ವದ ಘಟನೆಗಳ ಬಗ್ಗೆ ಮಾಹಿತಿ ನೀಡುವಲ್ಲಿ ಈ ರೀತಿಯಾಗಿ ವಿವರಿಸುವುದು ಕಂಡುಬರುತ್ತದೆ.

**೧. ಯಾದಗಿರಿಯ ಕೋಟೆಗಳು**

ಯಾದಗಿರಿ ಪರಿಸರವು ಕಲ್ಯಾಣಿ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿರುವುದರಿಂದ ಹಾಗೂ ಚಾಲುಕ್ಯರ ದೊರೆ ಎರಡನೆಯ ಜಯಸಿಂಹನ ಅಧಿಕಾರ ಅವಧಿ ಕ್ರಿ.ಶ. ೧೦೯೯ ರಿಂದ ೧೦೩೩ರವರೆಗೆ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಈ ಗಿರಿದುರ್ಗದ ಸುತ್ತಲೂ ಕೆಲವು ಕೋಟೆಗಳನ್ನು ನಿರ್ಮಿಸಿದನೆಂಬುದರ ಬಗ್ಗೆ ಎಂದು ಏಕಗಿರಿಯ ಶಾಸನದಿಂದ ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯರ ಅವನತಿಯ ನಂತರ ಈ ಪರಿಸರವು ಮುಂದೆ ಸುಮಾರು ವರ್ಷಗಳ ಬಹುಮನಿ ಸುಲ್ತಾನರ ವಶದಲ್ಲಿತ್ತು. ಈ ಗಿರಿದುರ್ಗದಲ್ಲಿ ಬಹುಮನಿ ಸುಲ್ತಾನರು ಕೆಲವು ಕೋಟೆಗಳನ್ನು ಕಟ್ಟಿ ಕೋಟೆಯ ಮೇಲೆ ತೋಪವನ್ನು ನಿರ್ಮಿಸಿದು ಕಂಡುಬರುತ್ತದೆ. ನಂತರ ಪರಿಸರವು ವಿಜಾಪುರದ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟು ಆದಿಲ್‌ಶಾಹಿ ಕಾಲದಲ್ಲಿ ಗಿರಿದುರ್ಗದ ಸುತ್ತಲೂ ಕೋಟೆಗಳು ನಿರ್ಮಿಸುವುದು ಮತ್ತು ತೋಪಗಳನ್ನು ನಿರ್ಮಿಸಿದ್ದನ್ನು ನಾವು ಶಾಸನಗಳಿಂದ ತಿಳಿದು ಬರುತ್ತದೆ.

“ಕೋಟೆಯ ಒಳಗಡೆ ಮೇಲೆ (ತಲಾಭ) ಕೊಳವನ್ನು ಒಂದನೇಯ ಇಬ್ರಾಹಿಮ್ ಆದಿಲ್‌ಶಾಹನ ಕಾಲದಲ್ಲಿ ಕ್ರಿ.ಶ. ೧೫೪೬ರಲ್ಲಿ ಕಟ್ಟಿಸಲಾಯಿತು. ಕೋಟೆಯೊಳಗೆ ಪೂರ್ವ ಗೋಡೆಯ ಹತ್ತಿರದ ಪಾತಾಳನಗರಿ ಬಾವಿಯನ್ನು ಸಹ ಇದೇ ಅರಸನ ಕಾಲದಲ್ಲಿ ಕ್ರಿ.ಶ. ೧೫೫೫ರಲ್ಲಿ ಅಲ್ಲಿಯ ಅಧಿಕಾರಿಯಾಗಿದ್ದ ಮಲಿಕ್ ಆಲಿಬೇಕನ್ ನೇತೃತ್ವದಲ್ಲಿ ಕಟ್ಟಲಾಯಿತು. ಕ್ರಿ.ಶ. ೧೫೫೭ರಲ್ಲಿ ಮಹಮ್ಮದ್ ಆಕನ್ ನೇತೃತ್ವದಲ್ಲಿ ಕೋಟೆಯ ಆಗ್ನೇಯ ದಿಕ್ಕಿನ ಮೂರ್ತಿಯ ಹತ್ತಿರವಿರುವ ನಿಜಾಮ ಬುರುಜನ್ನು ಹೈದ್ರಾಬಾದಿನ ನಿಜಾಮ ಅಲಿಖಾನನ ಆಳ್ವಿಕೆಯಲ್ಲಿ ಕ್ರಿ.ಶ. ೧೭೮೫ರಲ್ಲಿ ಆತನ್ನು ಯಾದಗಿರಿಗೆ ಭೇಟಿಯನ್ನು ನೀಡಿದಂತೆ ನೆನಪಿಗಾಗಿ ಕೋಟೆಯನ್ನು ಕಟ್ಟಿ ಕೋಟೆಯ ಒಳಗೆ ಒಂದು ಪರ್ಶಿಯನ್ ಲಿಪಿಯ ಶಾಸನವನ್ನು ನಿರ್ಮಿಸಿದನು ಎಂದೂ ಈ ಶಾಸನದಿಂದ ತಿಳಿದು ಬರುತ್ತದೆ.

ಊರ ಪೂರ್ವಕ್ಕಿರುವ ಬೆಟ್ಟದ ಮೇಲೆ ಏಳು ಸುತ್ತಿನ ಕೋಟೆಯಿದ್ದು, ಗಿರಿದುರ್ಗದ ತುದಿಯನ್ನು ತಲುಪಲು ಉತ್ತರ ದಿಕ್ಕಿನಿಂದ ಮೆಟ್ಟಿಲುಗಳ ದಾರಿಯಲ್ಲಿ ಎಂಟು ಬಾಗಿಲುಗಳ ಮೂಲಕ ಹೋಗಬೇಕಾಗುತ್ತದೆ. ಮೊದಲನೆಯ ಬಾಗಿಲು ಸಂಪೂರ್ಣವಾಗಿ ನಾಶವಾಗಿದೆ. ಇದರ ಎಡ ಭಾಗದಲ್ಲಿರುವ ಕಟ್ಟಡವನ್ನು ಹಿಂದಿನ ನವಾಬನ ಅಶುರ್‌ಖಾನನೆಂದು ಹೇಳುತ್ತಾರೆ. ಇಲ್ಲಿಂದ ಮೆಟ್ಟಿಲುಗಳ ಉದ್ದವಾದ ಶ್ರೇಣಿಯನ್ನು ಹತ್ತಿ ಮುಂದೆ ಹೋದಾಗ ಎರಡನೆಯ ಬಾಗಿಲು ಎದುರಾಗುತ್ತದೆ. ಈ ಬಾಗಿಲು ಎರಡು ಅರ್ಧ ವೃತ್ತಾಕಾರದ 'ಬುರುಜ'ಗಳ ಮಧ್ಯದಲ್ಲಿದೆ. ಬಾಗಿಲಿನ ಎರಡು ಬದಿಗಳಿಂದ ಮುಂದೆ ಚಾಚಿದ ಎರಡು ಗೋಡೆಗಳ ತುದಿಗಳಲ್ಲಿ ಮಿನರೆಟ್‌ಗಳಿವೆ. ಬಾಗಿಲಿನ ಚೌಕಟ್ಟು ಸರಳವಾಗಿದ್ದು ಬೋದಿಗೆಗಳು ಹೂವಿನ ಮಾದರಿಯವಾಗಿವೆ. ಚೌಕಟ್ಟಿನ ಮೇಲೆ ಕುರುಡು ಕಮಾನು ಇದೆ. ಆದರೆ ಮೇಲ್ಭಾಗದಲ್ಲಿ ನಾಲ್ಕು ಜೊತೆ ಪುಷ್ಪ ಬೋಧಿಗೆಗಳು ಮೇಲೆ ಮುಂದೆ ಚಾಚಿದ ಬಾಲ್ಕನಿಯಿದೆ. ಪ್ರವೇಶದ ಪ್ರತಿ ಕಟ್ಟೆಯ ಮೇಲೆ ಒಂದು ಕಾವಲುಗಾರನ ಕೊಠಡಿಯಿದೆ. ಪ್ರವೇಶದ ಒಳಮಾಳಿಗೆ ಗುಮ್ಮಟಕಾರವಾಗಿದೆ. ಬಾಗಿಲಿನಿಂದ ಒಳಗೆ ಹೋದಾಗ ಚೌಕಾಕಾರದ ಆವರಣ ಎದುರಾಗುತ್ತದೆ. ಈ ಆವರಣದ ಪೂರ್ವ ಉತ್ತರ ಮತ್ತು ಪಶ್ಚಿಮಕ್ಕೆ ಕಮಾನುಗಳ ಕೈಸಾಲೆಯಿದೆ. ಮೆಟ್ಟಿಲುಗಳ ಮೂಲಕ ಮುಂದೆ ಹೋದಾಗ ಮೂರನೆಯ ಬಾಗಿಲು ಎದುರಾಗುತ್ತದೆ. ಕಮಾನಿನ ಈ ಬಾಗಿಲಿಗೆ ಚೌಕಟ್ಟಿಲ್ಲ. ಇಲ್ಲಿಂದ ವಕ್ರವಾಗಿ ಮುಂದೆ ಸಾಗುವ ಮೆಟ್ಟಿಲುಗಳು ನಾಲ್ಕನೆಯ ಬಾಗಲಿಗೆ ಹೋಗುತ್ತವೆ. ನಾಲ್ಕನೆಯ ಬಾಗಿಲಿನ ಸರಳವಾದ ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಬಾಗಿಲನ್ನು ಕತ್ತರಿಸಿದ ಗಾರೆಯಿಂದ ಮಾಡಿದ ವೃತ್ತಕಾರದ ಪದಕ ಜ್ಯಾಮಿತಿಯ ವಿನ್ಯಾಸ ಕಮಾನುಗಳು ಮತ್ತು ಹೂಬಳ್ಳಿಗಳಿಂದ ಅಲಂಕರಿಸಿದೆ. ಪ್ರವೇಶದ ಮೇಲಿನ ಗುಮ್ಮಟಾಕಾರದ ಒಳಮಾಳಿಗೆಯನ್ನು ಸಹ ಕತ್ತರಿಸಿದ ಗಾರೆಯಿಂದ ಅಲಂಕರಿಸಿದೆ. ಪ್ರವೇಶದ ಪಕ್ಕದಲ್ಲಿರುವ ಪ್ರತಿ ಕಟ್ಟೆಯ ಮೇಲೆ ಕಮಾನಿನ ಅಂಕಣವಿದೆ. ಈ ಬಾಗಿಲು ಕೋಟೆಯ ಮೊದಲನೆಯ ಅಥವಾ ಸುತ್ತಿನಲ್ಲಿವೆ.

ಕೋಟೆಯೊಳಗೆ ನಾಲ್ಕನೆಯ ಬಾಗಿಲ ಹತ್ತಿರವಿದ್ದ ಪಟ್ಟಿ ಮತ್ತು ಬಳೆಗಳಿಂದ ಮಾಡಿದ ಒಂದು ತೋಪು ಬಿದ್ದಿವೆ. ಎರಡನೆಯ ಅಥವಾ ಮಧ್ಯದ ಕೋಟೆಯ ಪೂರ್ವ ದಿಕ್ಕಿನಲ್ಲಿ ಮೂಲೆಯ ಬುರುಜೀನ ಮೇಲೆ ಒಂದು ಮತ್ತು ಕೊನೆಯ ಬುರುಜೀನ ಮೇಲೆ ಮತ್ತೊಂದು ತೋಪುಗಳಿವೆ. ಇವುಗಳಲ್ಲಿ ಒಂದನೇ ಎರಕ ಹೊಯ್ದು ಮಾಡಿವೆ. ಭುವನೇಶ್ವರಿ ಗುಹಾ ದೇವಾಲಯದ ಹತ್ತಿರವಿರುವ ಅರ್ಧವೃತ್ತಾಕಾರದ ಒಂದು ಬುರುಜೀನ ಮೇಲೆ ಎರಕ ಹೊಯ್ದು ಮಾಡಿದ ಒಂದು ತೋಪಿದೆ. ಈ ಬುರುಜೀನ ಕೈಪಿಡಿ ಗೋಡೆಯು ಹೊರಭಾಗಕ್ಕೆ ಇಳಿಜಾರಿವೆ. ಕೈಪಿಡಿ ಗೋಡೆಯಲ್ಲಿ ಅಗಲವಾದ ತೋಪು ಸಂದಿಗಳಿವೆ. ಕೈಪಿಡಿ ಗೋಡೆಯ ಮೆಲೆ ರಾಮ,

ಲಕ್ಷ್ಮಣ ಮತ್ತು ಆಂಜನೇಯರ ಉಬ್ಬು ಶಿಲ್ಪಗಳಿವೆ. ರಾಮನು ಕೈಯಲ್ಲಿ ಮುದ್ರೆಯುಂಗುರವನ್ನು ಹಿಡಿದ್ದಾನೆ.[9] ಇದರ ಹತ್ತಿರವಿರುವ ಇಂತಹದೆ ಮತ್ತೊಂದು ಬುರುಜೀನ ಮೇಲೆ ಎರಕಹೊಯ್ದು ಮಾಡಿದ ಎರಡು ತೋಪುಗಳಿವೆ. ಇದರ ಕೈಪಿಡಿಗೋಡೆಯ ಮೇಲೆ ಆಂಜನೇಯ ಮತ್ತು ನಾಲ್ಕು ಮಂಗಗಳ ಸಂಯುಕ್ತ ಶಿಲ್ಪ ಇವೆ. ಈ ಬುರುಜುಗಳನ್ನು ೧೬ನೆಯ ಶತಮಾನದಲ್ಲಿ ಹಿಂದೂ ಅರಸರು ನಿರ್ಮಿಸಿದ್ದಾರೆ. ಇದೇ ಭಾಗದಲ್ಲಿಯ ನೀರಿನ ಕೊಳದಲ್ಲಿ ಒಂದು ಮತ್ತು ಇನ್ನೂ ಎರಡು ಬುರುಜುಗಳ ಮೇಲೆ ಒಂದೊಂದು ತೋಪುಗಳಿವೆ. ಕೊಳದ ಪಕ್ಕದಲ್ಲಿ ಆಯತಾಕಾರದ ದೊಡ್ಡ ಕಟ್ಟಡವಿದೆ. ಇದೇ ಭಾಗದಲ್ಲಿ ಕೋಟೆ ಮತ್ತು ಬೆಟ್ಟದ ಮಧ್ಯದಲ್ಲಿರುವ ದೊಡ್ಡ ಬಾವಿಗೆ ಕೆಳಗಿಳಿಯಲು ಮೆಟ್ಟಿಲುಗಳಿವೆ. ಆರನೆಯ ಬಾಗಿಲ ಪಶ್ಚಿಮಕ್ಕಿರುವ ಎರಡನೆಯ ಬುರುಜೀನ ಮೇಲೆ ೪.೪೨ ಮೀ ಉದ್ದವಿರುವ ದೊಡ್ಡ ತೋಪಿದೆ. ನಾಲ್ಕನೆಯ ಬಾಗಿಲಿನಿಂದ ಐದನೆಯ ಬಾಗಿಲಿಗೆ ಹೋಗುವ ದಾರಿಯಲ್ಲಿ ವೃತ್ತಾಕಾರದ ಕಣಜವಿದೆ. ಇದರ ಹೊರಭಾಗದಲ್ಲಿ ಮೆಟ್ಟಿಲುಗಳಿವೆ. ಕಟ್ಟಡ ಮೇಲ್ಭಾಗದಲ್ಲಿ ಬಿದ್ದು ಹೋಗಿವೆ.

ಸರಳವಾದ ಕಮಾನಿನ ಐದನೆಯ ಬಾಗಿಲು ಒಂದು ಬರುಜೀನ ಪಕ್ಕದಲ್ಲಿದೆ. ಹತ್ತಿರದಲ್ಲಿರುವ ಆರನೆಯ ಬಾಗಿಲಲ್ಲಿ ಬಂದು ಬುರುಜು ಮತ್ತು ಮುಂದಿನ ಆವರಣದ ಗೋಡೆಗಳ ಮಧ್ಯದಲ್ಲಿದೆ. ಬಾಗಿಲಿಗೆ ಸರಳವಾದ ಚೌಕಟ್ಟಿದ್ದು ಅದರ ಮೇಲೆ ಕುರುಡು ಕಮಾನಿದೆ. ಪ್ರವೇಶದ ಒಳಮಾಳಿಗೆಯಲ್ಲಿ ಎರಡು ಗುಮ್ಮಟಗಳು ಮತ್ತು ಪ್ರವೇಶದ ಪಕ್ಕದ ಪ್ರತಿ ಕೋಟೆಯಲ್ಲಿದೆ. ಮೆಟ್ಟಿಲುಗಳ ಮೂಲಕ ಸ್ವಲ್ಪ ದೂರ ಹೋದಾಗ ಸಿಗುವ ಏಳನೆಯ ಬಾಗಿಲು, ಆರನೆಯ ಬಾಗಿಲಿನಂತೆಯೇ ಇದೆ. ಆದರೆ ಇದರ ಪಕ್ಕದಲ್ಲಿ ಎರಡು ಚೌಕಾಕಾರದ ಬುರುಜುಗಳು ಮತ್ತು ಮುಂಭಾಗದಲ್ಲಿ ಆಯತಾಕಾರದ ಚಿಕ್ಕ ಆವರಣವಿದೆ. ಈ ಬಾಗಿಲಿನಲ್ಲಿ ಪುಷ್ಪ 'ಬೊದಿಗೆಗಳಿಗೆ ಬಾಗಿಲಿನ ದಕ್ಷಿಣಕ್ಕೆ ಬಂಡೆಯ ಪಕ್ಕದಲ್ಲಿ ವೃತ್ತಾಕಾರದ ಬತೇರಿಯಿದೆ. ಇದರ ಮೇಲೆ ಉದ್ದ ಪಟ್ಟಿ ಮತ್ತು ಬಳೆಗಳಿಂದ ಮಾಡಿದ ೪.೧೦ ಮೀ. ಉದ್ದವಿರುವ ದೊಡ್ಡ ತೋಪಿದೆ. ತೋಪಿನ ಕುತ್ತಿಗೆಯ ಮೇಲಿನ ಶಾಸನದಿಂದ ಇದನ್ನು ಕ್ರಿ.ಶ. ೧೫೫೦ರಲ್ಲಿ ಮಹಮ್ಮದ್ ಆತನ ನಿರ್ದೇಶನದಲ್ಲಿ ತಯಾರಿಸಲಾಯಿತೆಂದು ತಿಳಿಯುತ್ತದೆ. ಈ ಬತೇರಿಯ ಹೊರ ಗೋಡೆಯಲ್ಲಿ ಕಾವಲುಗಾರರ ಕೊಠಡಿಯಿದೆ. ಏಳನೆಯ ಬಾಗಿಲಿನಿಂದ ಮೆಟ್ಟಿಲುಗಳ ಮೂಲಕ ಸ್ವಲ್ಪ ದೂರ ಹೋದಾಗ ಕೊನೆಯ ಸುತ್ತಿಲಿನಲ್ಲಿರುವ ಎಂಟನೆಯ ಬಾಗಿಲು ಎದುರಾಗುತ್ತದೆ. ಈ ಬಾಗಿಲಿಗೆ ಸರಳವಾದ ಚೌಕಟ್ಟಿದೆ. ಅದರ ಮೇಲಿನ ಕುರುಡು ಕಮಾನನ್ನು ಗೆರೆಗಳಿಂದ ಚಿತ್ರಿಸಿದ ಮೂರು ಮೀನುಗಳಿಂದ ಅಲಂಕರಿಸಿದೆ. ಮೀನುಗಳ ತಲೆಗಳ ಮಧ್ಯದ ಕೇಂದ್ರ ಬಿಂದುವಿನ ಕಡೆಗೆ ಇವೆ. ಪ್ರವೇಶದ ಮೇಲಿನ ಮತ್ತು ಕಟ್ಟೆಗಳ ಮೇಲಿನ ಕಾವಲುಗಾರರ ಕೊಠಡಿಗಳು ಮಾಳಿಗೆ ಬಿದ್ದು ಹೋಗಿದೆ. ಈ ಬಾಗಿಲಿನಲ್ಲಿ L ಆಕಾರದ ಉಪ ಬಾಗಿಲಿದೆ.[10]

ಕೊನೆಯ ಬಾಗಿಲು ದಾಟಿದ ಕೂಡಲೆ ಚೌಕಾಕಾರದ ಆವರಣವಿದೆ. ಇದರಲ್ಲಿ ಶಿಥಿಲವಾದ ಕಟ್ಟಡಗಳ ಅವಶೇಷಗಳಿವೆ. ಇದರ ದಕ್ಷಿಣಕ್ಕೆ ಮೋತಿ ತಲಾಬ್ ಎಂದು ಕರೆಯಲಾಗುವ ಕೊಳವಿದೆ. ಇದನ್ನು ಕ್ರಿ.ಶ. ೧೫೪೬ರಲ್ಲಿ ಕಟ್ಟಿರುವುದು ಇದರ ಮೇಲಿನ ಶಾಸನದಿಂದ ತಿಳಿದು ಬರುತ್ತದೆ. ಆವರಣದ ಪಶ್ಚಿಮಕ್ಕೆ ಫಿರ್‌ದೌಸ್ ಮಹಲ್ ಎಂದು ಕರೆಯಲಾಗುವ ಅರಮನೆಯ ಅವಶೇಷಗಳಿವೆ. ವಿಶಾಲವಾದ ಅರಮನೆಯಲ್ಲಿ ವಿವಿಧ ಅಳತೆಯ ಅನೇಕ ಕೊಠಡಿಗಳು ಮತ್ತು ಹಜಾರಗಳಿವೆ. ಕಟ್ಟಡದ ಪಶ್ಚಿಮ ಭಾಗದಲ್ಲಿರುವ ದೊಡ್ಡ ಹಜಾರವು ದರ್ಬಾರ ಸಭಾಂಗಣವಾಗಿರಬಹುದು. ಇದರ ಮಧ್ಯೆದಲ್ಲಿ ಸುಂದರವಾದ ಬಹುವಲಯಗಳು ಮೂರು ಕಮಾನುಗಳು ಎರಡು ಸಾಲುಗಳಿವೆ. ಮುಂದಿನ ಸಾಲಿನ ಕಮಾನುಗಳನ್ನು ಅಷ್ಟೇ ಭುಜಾಕೃತಿಯ ಏಕಸ್ತಂಭಗಳ ಮೇಲೆ ನಿಂತಿವೆ. ಗೋಡೆಗಳಲ್ಲಿ ಅನೇಕ ಚಿಕ್ಕ ಗೂಡುಗಳಿವೆ. ಈ ಕಟ್ಟಡವನ್ನು ಕಲ್ಲಿನಿಂದ ಕಟ್ಟಿ ಸುಣ್ಣದ ಗಾರೆಯನ್ನು ಮಾಡಿ ಹೊರ ಭಾಗವನ್ನು ಹೊಳೆಯುವ ಹಂಚುಗಳಿಂದ ಅಲಂಕರಿಸಿದೆ. ಕೆಳಗೆ ಬಿದ್ದಿರುವ ಅವಶೇಷಗಳಲ್ಲಿ ಇಂತಹ ತುಂಡುಗಳನ್ನು ಕಾಣಬಹುದು.

ಅರಮನೆಯ ಪಶ್ಚಿಮಕ್ಕೆ ನೈಸರ್ಗಿಕವಾಗಿ ಊಟೆಯಿರುವ ನೀರಿನ ಕೊಳವಿದೆ. ಸುತ್ತಲೂ ಮೂರು ದಿಕ್ಕಿನಲ್ಲಿ ಕಟ್ಟಡಗಳ ಅವಶೇಷಗಳು ಮತ್ತು ದಕ್ಷಿಣಕ್ಕೆ ದೊಡ್ಡ ಬಂಡೆಯ ಶಿಖರವಿದೆ ಮೋತಿ ತಲಾಬ್‌ನ ಎಡಕ್ಕೆ ಎತ್ತರವಾದ ಗೋಡೆಗಳ ಆಯತಾಕಾರದ ಕಬೂತರ್‌ಖಾನ (ಪಾರಿವಾಳ ಮನೆ) ಇದೆ. ಇದರ ಎಡಕ್ಕೆ, ಉತ್ತರ ದಿಕ್ಕಿಗೆ ಬಾಗಿಲಿರುವ ಎತ್ತರ ಗೋಡೆಗಳ ತೆರೆದ ಆವರಣವಿದೆ. ಮೇಲೆ ತಲಾಬ್‌ನ ಪಶ್ಚಿಮಕ್ಕೆ ಎತ್ತರದಲ್ಲಿ ಘಡಿಯಾಲ್ ಖಾನವಿದೆ. ಇದಕ್ಕೆ ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕಮಾನಿನ ಕಿಟಕಿಗಳಿವೆ ಬಾಗಿಲ ಮೇಲ್ಭಾಗದಲ್ಲಿ ಎತ್ತರವಿಲ್ಲದ ಗುಮ್ಮಟ ಮತ್ತು ಎಡಕ್ಕೆ ಅಗಲವಾದ ಹಜಾರವಿದೆ. ಈ ಕಟ್ಟಡದ ಪಶ್ಚಿಮಕ್ಕೆ ಚೀನಿ ಮಸೀದಿಯಿದೆ. ಮಸೀದಿಯ ಮುಂಭಾಗದಲ್ಲಿ ಎರಡು ಕಮಾನುಗಳಿವೆ. ಇದರ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ಬಂಡೆಯಲ್ಲಿ ಕೊರೆದು ಮಾಡಿದ ತುಪ್ಪ ಮತ್ತು ಉಣ್ಣೆಯನ್ನು ಶೇಖರಿಸಿಡುವ ಕೊಳಗಳಿವೆ.

ಮಸೀದಿಯ ದಕ್ಷಿಣಕ್ಕೆ ಬಂಡೆಯ ಶಿಖರದ ಮೇಲಿರುವ ವೃತ್ತಾಕಾರದ ಬತೇರಿಯ ಮೇಲೆ ಎರಡು ತೋಪುಗಳಿವೆ. ಪಶ್ಚಿಮಾಭಿಮುಖವಾಗಿ ಗುಂಡು ಹಾರಿಸುವ ಭಂಗಿಯಲ್ಲಿ ನಿಂತಿರುವ ದೊಡ್ಡ ಉದ್ದ ೫.೫೦ ಮೀ. ಮತ್ತು ಸುತ್ತಳತೆ ೧.೫೨ ಮೀ. ಇದರ ಪಕ್ಕದಲ್ಲಿ ಬಿದ್ದಿರುವ ಚಿಕ್ಕ ತೋಪಿನ ಉದ್ದ ೨.೭೫ ಮೀ. ಮತ್ತು ಸುತ್ತಳತೆ ೨.೦೩ ಮೀ. ಚಿಕ್ಕ ತೋಪಿನ ಮೇಲೆ ಮಹಮ್ಮದ್ ಖಾಸಿಮ್ ಮತ್ತು ಹಜರಿ ೧೧೯೨ ಕ್ರಿ.ಶ. ೧೭೭೮ ಎಂದು ಬರೆದಿದೆ. ಸ್ವಲ್ಪ ದೂರದಲ್ಲಿ ಕೆಳಭಾಗದಲ್ಲಿ ವಾಯುವ್ಯ ಮೂಲೆಯ ಬಂಡೆಯ ಮೇಲೆ ಪಶ್ಚಿಮಾಭಿಮುಖವಾಗಿರುವ ಮತ್ತೊಂದು ತೋಪವಿದೆ. ಇದರ ಪಶ್ಚಿಮಕ್ಕೆ ಇಳಿಜಾರಿನಲ್ಲಿ ಬಹಳ

ಶಿಥಿಲವಾದ ಮಧ್ದಿನ ಮನೆಯಿದೆ. ಇದರ ದಕ್ಷಿಣಕ್ಕೆ ಪಶ್ಚಿಮಾಭಿಮುಖವಾಗಿರುವ ಇನ್ನೊಂದು ತೋಪಿದೆ..

ಬೆಟ್ಟದ ಮೇಲೆ ಮೂರು ಪ್ರಾಚೀನ ದೇವಾಲಯಗಳು ಕೆಲವು ಕೊಳಗಳು ಮತ್ತು ಬಾವಿಗಳಿವೆ. ಇವುಗಳಲ್ಲಿ ಪಾತಾಳನಗರಿ ಬಾವಿಯನ್ನು ಕ್ರಿ.ಶ. ೧೫೬೫ರಲ್ಲಿ ಕಟ್ಟಿಸಿರುವುದು ಅಲ್ಲಿರುವ ಶಾಸನದಿಂದ ತಿಳಿಯುತ್ತದೆ. ಬಾವಿಯ ಉತ್ತರ ದಿಕ್ಕಿಗಿರುವ ಬುರುಜೀನ ಮೇಲೆ ಒಂದು ತೋಪಿದೆ. ಆಗ್ನೆಯ ಮೂಲೆಯಲ್ಲಿರುವ ಬುರುಜನ್ನ ಕ್ರಿ.ಶ. ೧೭೮೫ರಲ್ಲಿ ಕಟ್ಟಲಾಯಿತೆಂಬುದು ಅದರ ಮೇಲಿನ ಶಾಸನದಿಂದ ತಿಳಿಯುತ್ತದೆ. ಹೀಗೆ ಯಾದಗಿರಿ ಪರಿಸರದ ಕೋಟೆಯು ಅನೇಕ ಅವಶೇಷಗಳು ಕೋಟೆಯ ಒಳಗಡೆ ಹೊಂದಿದೆ ಎಂದೂ ತಿಳಿದುಬರುತ್ತದೆ.

೨. ಚಂಡ್ರಕೀಯ ಕೋಟೆ

ಯಾದಗಿರಿ ತಾಲೂಕಿನಿಂದ ಪೂರ್ವ ದಿಕ್ಕಿಗೆ ಇರುವ ಗುರುಮಿಟ್‌ಕಲ್ ಚಂಡ್ರಕಿ ಎಂಬ ಗ್ರಾಮದಲ್ಲಿ ಪ್ರಾಚೀನ ಕಾಲದ ಮಣ್ಣಿನ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆಯು ಕ್ರಿ.ಶ. ೧೦ನೆಯ ಶತಮಾನದಲ್ಲಿ ಈ ಭಾಗದಲ್ಲಿ ಕಾಕಲೂವಾರು ಎಂಬ ದೊರೆಗಳ ಕಾಲದಲ್ಲಿ ನಿರ್ಮಿಸಲಾಯಿತು ಎಂದೂ ತಿಳಿದುಬರುತ್ತದೆ.

ಈ ಕೋಟೆಯು ವಿಸ್ತೀರ್ಣ ೨೨ ಎಕರೆ ೧೧ ಗುಂಡೆಯನ್ನು ವ್ಯಾಪ್ತಿಯಾಗಿದೆ. ಕೋಟೆ ಎತ್ತರದಲ್ಲಿ ಸುಮಾರು ೩೬ ಅಡಿ ಇದೆ. ಕೊಟೆಯನ್ನು ಕೆಳಗಡೆ ಕಲ್ಲಿನಿಂದ ನಿರ್ಮಿಸಲಾಗಿದ್ದು ಕಲ್ಲಿನಿಂದ ಕಟ್ಟಿದ ಕೋಟೆಯ ಸುಮಾರು ೨೦ ಅಡ್ಡಿ ಎತ್ತರದಲ್ಲಿ ನಂತರ ಮೇಲೆ ಕಪ್ಪು ಮಣ್ಣಿನಿಂದ ಕಟ್ಟಲಾಗಿದ್ದು ಮಣ್ಣಿನ ಮೇಲಿನ ಎತ್ತರ ಸುಮಾರು ೧೬ ಅಡಿಯಾಗಿವೆ"[೬] ಕೋಟೆಯ ಒಳಗಡೆ ಪ್ರವೇಶ ಮಾಡುವುದಕ್ಕೆ ಪೂರ್ವ ದಿಕ್ಕಿಗೆ ಮಹಾದ್ವಾರದ ಮೂಲಕ ಹೋಗಬೇಕಾಗುತ್ತದೆ. ದ್ವಾರಾದ ಮುಂದೆ, ಎರಡು ಕಮಾನುಗಳನ್ನು ಹೊಂದಿದೆ. ಕೋಟೆಯ ಒಳಗಡೆ ಐತಿಹಾಸಿಕಾಗಿ ಮೂರು ಬಾವಿಗಳು ಇದು ಬಾವಿಯ ಪಕ್ಕದಲ್ಲಿ ದಕ್ಷಿಣ ದಿಕ್ಕಿಗೆ ಚಿಕ್ಕದಾದ ದೇವಾಲಯವಿದೆ. ಇದಕ್ಕೆ ಪ್ರಥಮ ದೇವಾಲಯ ಎಂದೂ ಕರೆಯುತ್ತಾರೆ. ಅದರ ಪಕ್ಕದಲ್ಲಿ ಶ್ರೀ ಹನುಮಾರಿನ ದೇವಾಲಯ ಮತ್ತು ಬಸವೇಶ್ವರ ದೇವಾಲಯ ಇದೆ. ಕೋಟೆಯ ಒಳಗಡೆ ಉತ್ತರ ದಿಕ್ಕಿಗೆ ಇರುವ ಬಾವಿಗೆ ಕೆಳಗಡೆ ಇಳಿಯಲು ೧೭ ಮೆಟ್ಟಲುಗಳು ನಿರ್ಮಿಸಲಾಗಿದೆ. ಈ ಬಾವಿಯ ವಿಸ್ತೀರ್ಣ ೫೦ x ೪೦ ಫೀಟ್‌ವಾಗಿದೆ. ಈ ಬಾವಿಯ ಸುತ್ತಲೂ ಮಣ್ಣಿನಿಂದ ಕಟ್ಟಿದ ಕೋಟೆಯನ್ನು ನಿರ್ಮಿಸಲಾಗಿದೆ ಮತ್ತು ಕೋಟೆಯ ಹಿಂದಿನ ದ್ವಾರ ಬಾಗಿಲಿಗೆ ಒಂದು ತೋಪುವನ್ನು ನಿರ್ಮಿಸಲಾಗಿದೆ. ಈ ರೀತಿಯಲ್ಲಿ ಚಂಡ್ರಕೀಯ ಕೋಟೆಯನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಬೇಕಾಗಿದೆ.

ಈ ಚಂದ್ರಕೀಯ ಕೋಟೆಯಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡು ಬರುವುದಿಲ್ಲ. "ರಘುನಾಥ ಕುಲಕರ್ಣಿಯ ಅಭಿಪ್ರಾಯದಂತೆ ಈ ಕೋಟೆಯನ್ನು ಕಾಕಲುವಾರು ಸಂಸ್ಥಾನದ ಅರಸ ರಾಜ ಲಕ್ಷ್ಮಣವ ದೇಶಮುಖ ಅವರ ಅಧಿಕಾರ ಅವಧಿಯ ಕ್ರಿ.ಶ. ೧೨ನೆಯ ಶತಮಾನದಲ್ಲಿ ನಿರ್ಮಿಸಲಾಯಿತು"[೬] ಎಂದೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**೩. ಗುರುಮಿಟಕಲಿನ ಕೋಟೆ**

"ಗುರುಮಿಟ್‌ಕಲ್ ಪರಿಸರದ ಒಳಗಡೆ ಕಾಕಲುವಾರು ಸಂಸ್ಥಾನದ ಆಳ್ವಿಕೆಯಲ್ಲಿ ನಿರ್ಮಿಸಿದ ಕೋಟೆಯೊಂದಿದೆ. ಈ ಕೋಟೆಯು ವಿಸ್ತೀರ್ಣದಲ್ಲಿ ಸುಮಾರು ೧೮ ಎಕರೆ ೩೬ ಗುಂಟೆಯನ್ನು ಹೊಂದಿದೆ. ಕೋಟೆಯು ಎತ್ತರದಲ್ಲಿ ೩೬ ಅಡಿ ಇದೆ. ಕೆಳಗಡೆ ಕಲ್ಲಿನಿಂದ ಕಟ್ಟಿದ್ದು ೨೦ ಅಡಿ ಎತ್ತರವಾಗಿದೆ ಮತ್ತು ಮೇಲಕ್ಕೆ ಕಪ್ಪು ಮಣ್ಣಿನಿಂದ ಕಟ್ಟಿದ್ದು ಸುಮಾರು ೧೬ ಅಡಿ ಎತ್ತರದಲ್ಲಿದೆ. ಕೋಟೆಯನ್ನು ಒಳಗಡೆ ಪ್ರವೇಶಿಸುವುದಕ್ಕೆ ಪೂರ್ವ ದಿಕ್ಕಿಗೆ ಮಹಾದ್ವಾರ ಇದೆ. ಕೋಟೆಯ ಒಳಗಡೆ ಯಾವುದೇ ಮೂರ್ತಿಶಿಲ್ಪಗಳು, ತೋಪಗಳು ಕಂಡು ಬರುವುದಿಲ್ಲ. ಆದರೆ ಒಂದು ಐತಿಹಾಸಿಕ ಬಾವಿಯನ್ನು ಒಳಗಡೆ ನಿರ್ಮಿಸಲಾಗಿದೆ. ಈ ಕೋಟೆಯನ್ನು ಸಂಸ್ಥಾನದ ಯಾವ ಅರಸನ ಕಾಲದಲ್ಲಿ ನಿರ್ಮಾಣವಾಯಿತು ಎಂಬುವುದು ಖಚಿತವಾಗಿ ಹೇಳಲು ಕಷ್ಟವಾಗುತ್ತದೆ."[೮]

ಗುರುಮಿಟ್‌ಕಲ್‌ನ ಪಶ್ಚಿಮ ದಿಕ್ಕಿಗೆ ಇರುವ "ಬೋರ ಬಂಡಾ ಎಂಬ ಗ್ರಾದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿದೆ. ಚಿಕ್ಕದಾದ ಕೋಟೆ ಇದೆ. ಈ ಕೋಟೆಯ ವಿಸ್ತೀರ್ಣ ಸುತ್ತಳತೆಯಲ್ಲಿ ಸುಮಾರು ೨೦ ಗುಂಟೆಯನ್ನು ಹೊಂದಿದೆ. ಕೋಟೆಯ ಎತ್ತರದಲ್ಲಿ ೧೫ ಅಡಿ ಇದೆ. ಕೋಟೆಯ ಒಳಗಡೆ ಕಲ್ಯಾಣಿ ಚಾಲುಕ್ಯರ ಕಾಲದ ದೇವಾಲಯವಿದ್ದು ಅದಕ್ಕೆ ಸಂಪೂರ್ಣ ಹಾಳು ಮಾಡಿ ಆಧುನಿಕ ಶೈಲಿಯಲ್ಲಿ ವೆಂಕಟೇಶ್ವರ ದೇವಾಲಯವನ್ನು ನಿರ್ಮಿಸಲಾಗಿದೆ. ಇದು ಕಲ್ಲಿನಿಂದ ಕಟ್ಟಿದ ಕೋಟೆಯಾಗಿರುವುದರಿಂದ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಯಿತು.

**೪.೨. ಕೆರೆಗಳು**

ಜಲ ಸಂಪನ್ಮೂಲಗಳು ಮಾನವನಿಗೆ ಆದಿಕಾಲದಿಂದಲೂ ಪ್ರಮುಖ ಪಾತ್ರವಹಿಸುತ್ತ ಬಂದಿದೆ. ಹಿಂದಿನ ಅನೇಕ ಪುರಾತನ ನಾಗರಿಕತೆಗಳನ್ನು ಗಮನಿಸಿದಾಗ ಅವುಗಳು ಅರಳಿಮೆ ಜಲತಟದಲ್ಲೇ. ತಟಿಕ ನಿರ್ಮಾಣ ನಿರ್ವಹಣೆ ಅದರಲ್ಲಿ ಜನಪದರು ಪಾಲ್ಗೊಂಡ ರೀತಿ ನೀತಿ ತುಂಬ ಸ್ವಾರಸ್ಯವಾದ ಅಧ್ಯಯನ ಇತಿಹಾಸ ಪುಟಗಳಲ್ಲಿ ಮೌರ್ಯದ ಕಾಲದಿಂದಲೂ ಕೆರೆ ನಿರ್ಮಾಣದ ಪ್ರಕ್ರಿಯೆ ಪ್ರಕಟಿತ (ಕ್ರಿ.ಪೂ. ೪ನೆಯ ಶತಕ) ಅದರ ದುರಸ್ತಿ ನಿರ್ವಹಣೆ ಕೂಡ ದಾಖಲಾತಿಗೊಂಡಿದ್ದು ಸ್ಪಷ್ಟ ಈ ಹಿನ್ನೆಲೆಯಲ್ಲಿ ರಾಮರಾವ್ ಹೆಗಡೆಯವರ ಕೆರೆ ನಿರ್ವಹಣೆ

ಚಾರಿತ್ರಿಕ ಅಧ್ಯಯನ ಸಿ.ಎಸ್. ವಾಸುದೇವನ್ ಹಂಪಿ ಪರಿಸರದ ಕೆರೆಗಳು. ಇಂತಹ ಅನೇಕ ಪುಸ್ತಕಗಳು ಕರ್ನಾಟಕದ ಕೆರೆಯನ್ನು ಕುರಿತು ಉಲ್ಲೇಖವಾಗಿವೆ.

ಪ್ರಾಚೀನ ಮತ್ತು ಮಧ್ಯಕಾಲೀನ ರಾಜ್ಯಗಳು ಕೃಷಿ ಪ್ರಧಾನ ಅರ್ಥವ್ಯವಸ್ಥೆಯನ್ನು ಹೊಂದಿದ್ದವು. ಈ ರಾಜ್ಯಗಳು ತಮ್ಮ ಆರ್ಥಿಕ ಸ್ಥಿತಿ ಬಲಪಡಿಸಿಕೊಳ್ಳಲು ಕೃಷಿ ಅಭಿವೃದ್ಧಿಯ ಕಡೆಗೆ ಗಮನ ನೀಡುವುದು ಅಗತ್ಯವಾಗಿತ್ತು. ಇದಕ್ಕಾಗಿ ರಾಜ್ಯಗಳು ಕೃಷಿ ಕ್ಷೇತ್ರ ವಿಸ್ತರಣೆ ಮತ್ತು ಈಗಾಗಲೆ ಇರುವ ಕೃಷಿ ಕ್ಷೆತ್ರಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಕಾರ್ಯಗಳನ್ನು ಮಾಡಲು ತಮ್ಮ ಅಧೀನ ಸಂಸ್ಥೆಗಳ ಅಧಿಕಾರಿಗಳು ಹಾಗೂ ಸಮಂಜದ ವಿವಿಧ ವರ್ಗಗಳು ಕೃಷಿಯನ್ನು ಅಭಿವೃದ್ಧಿಪಡಿಸಲು ಅನೇಕ ಕೆರೆಗಳನ್ನು ನಿರ್ಮಾಣ ಮಾಡಿದರು ಎಂದೂ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ.

ಕರ್ನಾಟಕ ಕೆರೆಗಳು ಐತಿಹಾಸಿಕ ಹಿನ್ನೆಲೆವುಳ್ಳವಾಗಿವೆ. ಶತ ಶತಮಾನದ ಕಾಲದಿಂದ ಕರ್ನಾಟಕದಲ್ಲಿ ಕೆರೆಗಳು ನಿರ್ಮಾಣವಾದವು ಎಂದೂ ಪ್ರಾಚೀನ ಶಾಸನಗಳಲ್ಲಿ ಉಲ್ಲೇಖವಿದೆ. "ಕರ್ನಾಟಕದಲ್ಲಿ ಅತ್ಯಧಿಕವಾಗಿ ಕೆರೆಗಳು ಏಕೆ ನಿರ್ಮಾಣಗೊಂಡವು ಎಂಬ ಪ್ರಶ್ನೆಯು ನಮ್ಮಲ್ಲಿ ಸಹಜವಾಗಿ ಉದ್ಭವಿಸುತ್ತದೆ. ಇದಕ್ಕೆ ಉತ್ತರವನ್ನು ನಾವು ಇಂದಿನ ಮತ್ತು ಪ್ರಾಚೀನ ಕಾಲದ ಮುಖ್ಯವಾಗಿ ಕ್ರಿ.ಶ. ಹತ್ತನೆಯ ಶತಮಾನದ ಹವಾಮಾನಗಳನ್ನು ಪರಿಶೀಲಿಸಿದಾಗ ಕಂಡುಕೊಳ್ಳಬಹುದು. ಇತ್ತೀಚಿಗೆ ನಡೆಸಿದ ಕೆಲವು ವೈಜ್ಞಾನಿಕ ಸಂಶೋಧನೆಗಳಿಂದ ಇಂದಿನ ಹವಾಮಾನವು ಮತ್ತು ಹದಿನೈದನೆಯ ಶತಮಾನದ ಹವಾಮಾನವು ಒಂದೇ ಆಗಿತ್ತೆಂದು ದೃಢಪಟ್ಟಿದೆ ಈ ವಿಷಯದಿಂದ ಮೇಲಿನ ವ್ಯಾಖ್ಯೆಗಳನ್ನು ಆಯ್ದುಕೊಳ್ಳಲಾಗಿದೆ."[೯]

ಈ ಹಿನ್ನೆಲೆಯಲ್ಲಿ ಗುಲಬರ್ಗಾ ಜಿಲ್ಲೆಯ ಯಾದಗಿರಿ ಪರಿಸರವು ಪ್ರಾಚೀನ ಶಿಲಾಯುಗ ಸಂಸ್ಕೃತಿಯಿಂದ ಆಧುನಿಕ ಇತಿಹಾಸದವರೆಗೆ ಪ್ರಾಚೀನ ಕರ್ನಾಟಕವನ್ನು ಆಡಳಿತ ಮಾಡಿದ ಕೆಲವು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದರಿಂದ ಈ ಪರಿಸರದ ಸುಮಾರು ೧೪೪ ಗ್ರಾಮಗಳಲ್ಲಿ ೧೩೬ ಕೆರೆಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ಅಧ್ಯಯನದಲ್ಲಿ ಆಯ್ದುಕೊಂಡಿರುವ ಯಾದಗಿರಿ ಮತ್ತು ಗುರುಮಿಟ್‌ಕಲ್ ಹೋಬಳಿಗಳಲ್ಲಿ ಒಟ್ಟು ೩೧ ಕೆರೆಗಳನ್ನು ಒಳಗೊಂಡಿದೆ.

## ಐತಿಹಾಸಿಕ ಯಾದಗಿರಿ ಪರಿಸರದ ಕೆರೆ

ಕಲ್ಯಾಣಿ ಚಾಲುಕ್ಯರ ದೊರೆ ೨ನೆಯ ಜಯಸಿಂಹನು ಕ್ರಿ.ಶ. ೧೦೧೯ ರಿಂದ ೧೦೩೩ರವರೆಗೆ ಈ ಪರಿಸರದ ಏತಗಿರಿ(ಯಾದಗಿರಿ)ಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಗಿರಿದುರ್ಗದ ಪೂರ್ವದಿಕ್ಕಿಗೆ ಒಂದು ವಿಶಾಲವಾದ ಕೆರೆಯನ್ನು ನಿರ್ಮಿಸಿದನು. ಎಂದು ಏತಗಿರಿ ಶಾಸನದಿಂದ

ತಿಳಿದುಬರುತ್ತದೆ. ೨ನೆಯ ಜಯಸಿಂಹನು ತನ್ನ ಅಧಿಕಾರ ಅವಧಿಯ ೧೪ ವರ್ಷಗಳಲ್ಲಿ ಕೃಷಿಯನ್ನು ಬಲಪಡಿಸಲು ಅನೇಕ ಕೆರೆಗಳನ್ನು ನಿರ್ಮಿಸಿದನು ಎಂದು ತಿಳಿದು ಬರುತ್ತದೆ.

ಕೆರೆಯ ವಿಸ್ತೀರ್ಣದಲ್ಲಿ ಸುಮಾರು ೮೪.೪ ಎಕರೆಯಾಗಿದ್ದು ಉತ್ತರದಿಂದ ದಕ್ಷಿಣಕ್ಕೆ ಸುಮಾರು ೨. ಕಿ.ಮೀ. ರಷ್ಟು ವ್ಯಾಪಿಸಿದೆ. ಕೆರೆಯ ಮಧ್ಯದಲ್ಲಿ ನಾಲ್ಕು ತೂಟ್ (ತೊಬ್) ನಿರ್ಮಿಸಲಾಗಿದೆ. ಈ ಕೆರೆಯು ಎತ್ತರದಲ್ಲಿ ೩೧ ಅಡಿಯನ್ನು ಹೊಂದಿದೆ. ಕೆರೆಯ ಪೂರ್ವದಿಕ್ಕಿಗೆ ವಿಶಾಲವಾದ ಹಳ್ಳದ ಮೂಲಕ ನೀರನ್ನು ಸಂಗ್ರಹಿಸಿಲಾಗುತ್ತದೆ. ಈ ಕೆರೆಯು ಪ್ರಮುಖವಾಗಿ ಕೃಷಿ ಮತ್ತು ಕೈಗಾರಿಕೆಗಳಿಗೆ ಸಹಾಯಕವಾಗಿದ್ದು, ಕೆರೆಯ ನೀರನ್ನು ತೂಬಿನ ಮೂಲಕ ಹೊರಗಡೆ ಬಿಡಲಾಗುತ್ತದೆ. ಸುಮಾರು ಹೆಕ್ಟೇರ್‌ಗಳಷ್ಟು ಪ್ರದೇಶವು ನೀರಾವರಿಯನ್ನು ವ್ಯಾಪಿಸಿದೆ. ಈ ಕೆರೆಯಲ್ಲಿ ಯಾವುದೇ ಶಾಸನಗಳು ಮತ್ತು ಸ್ಮಾರಕಗಳು ಕಂಡು ಬರುವುದಿಲ್ಲ. ಇವರಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

**ರಾಮಸಮುದ್ರ ಕೆರೆ**

ಯಾದಗಿರಿ ಪರಿಸರದ ಪೂರ್ವ ದಿಕ್ಕಿಗಿರುವ ೧೨ ಕಿ.ಮೀ. ಅಂತರದ ರಾಮಸಮುದ್ರ ಗ್ರಾಮವು ಪ್ರಾಚೀನ ಕಾಲದ ಕೆರೆಯನ್ನು ಹೊಂದಿದೆ. ಈ ಕೆರೆಯನ್ನು ಕುರಿತು ಒಂದು ಐತಿಹ್ಯ ಹೀಗೆ ಇದೆ. ರಾಮನು ಈ ಪ್ರದೇಶದಲ್ಲಿ ಬಂದು ವಾಸಿಸಿದ್ದನು. ತನ್ನ ಗೋವುಗಳ ರಕ್ಷಣೆ ಮತ್ತು ಸಕಲ ಪ್ರಾಣಿಗಳ ನೀರು ಕುಡಿಯುವುದಕ್ಕೆ ಈ ಸ್ಥಳದಲ್ಲಿ ಒಂದು ವಿಶಾಲವಾದ ಕೆರೆಯನ್ನು ನಿರ್ಮಿಸಿದನು. ರಾಮ x ವಾಸ ಮತ್ತು ರಾಮxವನವಾಸ ಹೀಗಾಗಿ ಈ ಗ್ರಾಮಕ್ಕೆ ಪ್ರಾರಂಭದಲ್ಲಿ ರಾಮವಾಸ ಎಂಬ ಹೆಸರು ಇತ್ತು ಎಂದು ತಿಳಿದು ಬರುತ್ತದೆ. ನಂತರ ಕಲ್ಯಾಣಿ ಚಾಲುಕ್ಯರ ೨ನೆಯ ಜಯಸಿಂಹನ ಆಳ್ವಿಕೆಯಲ್ಲಿ ಕೃಷಿ ಮತ್ತು ನೀರಾವರಿಗೆ ಆದ್ಯತೆಯನ್ನು ನೀಡಿದ್ದರಿಂದ ತನ್ನ ಆಡಳಿತದ ಅಧಿಕಾರಿಯಾದ ರಾಮಚಂದ್ರನೇ ಈ ಕೆರೆಯನ್ನು ಕಟ್ಟಿಸಿದನು. ಆದ್ದರಿಂದಲೆ ಈ ಗ್ರಾಮಕ್ಕೆ ರಾಮಚಂದ್ರ ಎಂದು ಹೆಸರು ಬರುವುದಕ್ಕೆ ಕಾರಣವಾಯಿತೆಂದು ಎಂದು ತಿಳಿದುಬರುತ್ತವೆ. ಈ ಕೆರೆಯ ಪರಿಸರದಲ್ಲಿ ಯಾವುದೇ ಶಾಸನಗಳು ಸ್ಮಾರಕಗಳು ಇಲ್ಲದೇ ಇರುವುದರಿಂದ ಈ ಕೆರೆಯನ್ನು ಯಾರ ಆಳ್ವಿಕೆಯಲ್ಲಿ ನಿರ್ಮಾಣವಾಯಿತು ಎಂಬುದು ಸ್ಪಷ್ಟವಾಗಿ ಹೇಳಲು ಕಷ್ಟವಾಗುತ್ತದೆ.

ಮೇಲಿನ ಐತಿಹ್ಯವನ್ನು ಗಮನಿಸಿದಾಗ ಸಾಮಾನ್ಯವಾಗಿ ಈ ಕೆರೆಯನ್ನು ಕಲ್ಯಾಣಿ ಚಾಲುಕ್ಯರ ದೊರೆ ೨ನೆಯ ಜಯಸಿಂಹನ ಅಧಿಕಾರ ಅವಧಿಯ ಕ್ರಿ.ಶ. ೧೦೧೯ ರಿಂದ ೧೦೩೩ ಆಳ್ವಿಕೆಯಲ್ಲಿ ಈ ಕೆರೆಯನ್ನು ನಿರ್ಮಿಸಿದನೆಂದು ಕೆಲವು ಆಧಾರಗಳ ಮೂಲಕ ತಿಳಿದುಬರುತ್ತದೆ. ಕೆರೆಯು ವಿಶಾಲವಾಗಿದ್ದು ವಿಸ್ತೀರ್ಣದಲ್ಲಿ ೭೬ ಎಕರೆಯನ್ನು ವ್ಯಾಪಿಗೆ

ಗ್ರಾಮದ ಉತ್ತರ ದಿಕ್ಕಿನಿಂದ ದಕ್ಷಿಣಕ್ಕೆ ೨ ಕಿ.ಮೀ. ರಷ್ಟು ಉದ್ದದಲ್ಲಿ ವ್ಯಾಪಿಸಿದೆ. ಎತ್ತರದಲ್ಲಿ ೩೪ ಅಡಿಯಾಗಿದೆ. ಕೆರೆಕಟ್ಟೆಯಲ್ಲಿ ೩ ತೂಬ್‌ಗಳನ್ನು ಒಳಗೊಂಡಿವೆ. ತೋಬಿನ ಮೂಲ ನೀರನ್ನು ಹೊರಗಡೆ ಬಿಡಲಾಗುತ್ತದೆ. ಸುಮಾರು ಹೆಕ್ಟೇರ್‌ಗಳಷ್ಟು ಪ್ರದೇಶ ಕೃಷಿಗೆ ಮತ್ತು ನೀರಾವರಿ ಸಹಾಯಕವಾಗಿದೆ ಎಂದು (ಬಸಪ್ಪ ಐನೋರ್ ಹಿರೇಮಠ) ಕ್ಷೇತ್ರಕಾರ್ಯದಲ್ಲಿ ಮಾಹಿತಿ ನೀಡಿದ್ದಾರೆ.

## ಮೈಲಾರಪುರದ ಕೆರೆ

ಕರ್ನಾಟಕದ ಧಾರ್ಮಿಕ ಕ್ಷೇತ್ರದಲ್ಲಿ ಒಂದಾಗಿರುವ ಮೈಲಾರಪುರ ಎಂಬ ಗ್ರಾಮದಲ್ಲಿ ಶ್ರೀ ಮೈಲಾರಲಿಂಗೇಶ್ವರ ದೇವಸ್ಥಾನವು ಇದ್ದು, ಈ ದೇವಸ್ಥಾನದ ಪೂರ್ವ ದಿಕ್ಕಿಗೆ ವಿಶಾಲವಾದ ಪ್ರಾಚೀನ ಕಾಲದ ಕೆರೆಯನ್ನು ಹೊಂದಿದೆ. ಈ ಕೆರೆಯನ್ನು ಹೊನ್ನಕೆರೆ ಎಂದೂ ಕರೆಯಲಾಗುತ್ತದೆ. ಕಲ್ಯಾಣದ ಕಲಚೂರಿ ಅರಸ ಬಿಜ್ಜಳನ ಅಧಿಕಾರ ಅವಧಿಯ ಕ್ರಿ.ಶ. ೧೧೫೦ ರಿಂದ ೧೧೬೧ರಲ್ಲಿ ವೀರಶೈವ ಧರ್ಮದ ಬಸವಣ್ಣ ಅವರ ನೇತೃತ್ವದಲ್ಲಿ ಧಾರ್ಮಿಕ ಚಳುವಳಿ ಪ್ರಾರಂಭವಾಯಿತು. ಈ ಹಿನ್ನೆಲೆಯಲ್ಲಿ ಮೈಲಾರಲಿಂಗೇಶ್ವರ ದೇವಸ್ಥಾನದ ಪೂರ್ವ ದಿಕ್ಕಿಗೆ ಧಾರ್ಮಿಕತೆಯ ಬಗ್ಗೆ ಅಪಾರ ನಂಬಿಕೆ ಹೊಂದಿದ ಅರಸ ಬಿಜ್ಜಳನು ಈ ಕೆರೆಯನ್ನು ನಿರ್ಮಿಸಿದನು ಎಂದೂ ದೇವಾಲಯದ ಪೂಜಾರಿ ಮಲ್ಲಯ್ಯ ಸ್ವಾಮಿಯವರು ಮಾಹಿತಿ ನೀಡದರು.

ಈ ಕೆರೆಯು ಸುಮಾರು ವಿಸ್ತೀರ್ಣದಲ್ಲಿ ೬೦ ಎಕರೆಯನ್ನು ವ್ಯಾಪಿಸಿದ್ದು, ಮೈಲಾರಲಿಂಗೇಶ್ವರ ಗಿರಿದುರ್ಗದಿಂದ ಪೂರ್ವಕ್ಕೆ ೧.೫ ಕಿ.ಮೀ.ಯನ್ನು ಉದ್ದದಲ್ಲಿ ವಿಸ್ತರಿಸಲಾಗಿದೆ. ಈ ಕೆರೆಯ ಬಗೆಗೆ ಯಾವುದೇ ಶಾಸನಗಳು, ಸ್ಮಾರಕಗಳು ಕಂಡು ಬುರುವುದಿಲ್ಲ. ದಿನನಿತ್ಯದ ಕೆಲಸ ಕಾರ್ಯಗಳಿಗೆ ಸಹಾಯಕವಾಗಿದೆ.

## ಹಳಗೇರಾ ಗ್ರಾಮದ ಕೆರೆ

ಯಾದಗಿರಿ ಪರಿಸರದ ದಕ್ಷಿಣ ದಿಕ್ಕಿನಲ್ಲಿ ಬರುವ ೧೮ ಕಿ.ಮೀ. ಅಂತರದಲ್ಲಿರುವ ಈ ಗ್ರಾಮವು ಪ್ರಾಚೀನ ಕಾಲದ ಐತಿಹಾಸಿಕ ಕೆರೆಯನ್ನು ಹೊಂದಿದೆ. ಈ ಕೆರೆಯನ್ನು ಕಲ್ಯಾಣಿ ಕಲಚೂರಿ ಅರಸ ಬಿಜ್ಜಳನ ಆಳ್ವಿಕೆಯಲ್ಲಿ ನಿರ್ಮಿಸಲಾಯಿತು ಎಂದು ತಿಳಿದು ಬರುತ್ತದೆ. ಈ ಕೆರೆಯು ವಿಸ್ತೀರ್ಣದಲ್ಲಿ ೨೫ ಹೆಕ್ಟೇರ್‌ಗಳಷ್ಟು ಹೊಂದಿದ್ದು ಉದ್ದದಲ್ಲಿ ೧ ಕಿ.ಮೀ. ವ್ಯಾಪಿಸಿದೆ. ಮೈಲಾರಲಿಂಗೇಶ್ವರನ ಪೂರ್ವ ವಾಸಸ್ಥಾನ ಈ ಪ್ರದೇಶವಾಗಿದ್ದರಿಂದ ಈ ಗ್ರಾಮದಲ್ಲಿ ಕಲ್ಯಾಣಿ ಅರಸ ಬಿಜ್ಜಳನು ಒಂದು ವಿಶಾಲವಾದ ಕೆರೆಯನ್ನು ಕಟ್ಟಿದನು.

ಈ ಕೆರೆಯಲ್ಲಿ ಕೆಲವು ಮೈಲಾರಲಿಂಗನ ಅವಶೇಷಗಳು ಕಂಡು ಬರುತ್ತವೆ. ಯಾವುದು ಶಾಸನಗಳು ಮತ್ತು ಸ್ಮಾರಕಗಳು ಕಂಡು ಬರುವುದಿಲ್ಲ. ಕೃಷಿ ಮತ್ತು ನೀರಾವರಿ ವ್ಯವಸ್ಥೆಗೆ ಸಹಾಯಕವಾಗಿದೆ.

**ಅರೆಕೇರಾ ಕೆ. ಗ್ರಾಮದ ಕೇರೆ**

ಯಾದಗಿರಿ ಪರಿಸರ ಎಂದು ಪೂರ್ವ ದಿಕ್ಕಿಗೆ ೧೮ ಕಿ.ಮೀ. ಅಂತರದಲ್ಲಿರುವ ಅರೆಕೇರಾ ಎಂಬ ಗ್ರಾಮದಲ್ಲಿ ಕ್ರಿ.ಶ. ೧೨ನೆಯ ಶತಮಾನ ಕಾಲದಲ್ಲಿ ನಿರ್ಮಿಸಿರುವ ಕೆರೆ ಕಂಡು ಬರುತ್ತದೆ. ಈ ಕೆರೆಯ ಪಕ್ಕದ ಗಿರಿದುರ್ಗದ ಮೇಲೆ ಕಲ್ಯಾಣದ ಕಲಚೂರಿ ಕಾಲದ ಧಾರ್ಮಿಕ ಚಳುವಳಿಯ ಈರಣ್ಣ ದೇವಸ್ಥಾನವು ಇದೆ. ಈ ದೇವಾಲಯದ ಮುಂದುಗಡೆ ಇರುವ ವಿಶಾಲ ಕೆರೆಗೆ ಈರಣ್ಣ ಕೇರೆ ಎಂದೂ ಕರೆಯುತ್ತಾರೆ. ಸುಮಾರು ೨೪ ಹೆಕ್ಟೇರುಗಳಷ್ಟು ವಿಶಾಲವಾದ ಈ ಕೆರೆಯು ಕಲಚೂರಿ ಅರಸರ ಕಾಲದಲ್ಲಿ ನಿರ್ಮಾಣವಾಯಿತೆಂದು ತಿಳಿದುಬರುತ್ತದೆ.

**ಯಾದಗಿರಿಯ ದಕ್ಷಿಣ ದಿಕ್ಕಿನ ಕೆರೆ**

ಯಾದಗಿರಿ ಪರಿಸರವು ಕಲ್ಯಾಣಿ ಚಾಲುಕ್ಯರ ಅವನತಿಯ ನಂತರ ಬಿಜಾಪುರದ ಆದಿಲ್‌ಶಾಹಿಗಳ ವಶವಾಯಿತು. ಆದಿಲ್‌ಶಾಹಿಗಳು ತಮ್ಮ ಅಧಿಕಾರ ಆಳ್ವಿಕೆಯ ಕ್ರಿ.ಶ. ೧೫೫೫ರಲ್ಲಿ ಈ ಪರಿಸರದ ಗಿರಿದುರ್ಗದ ಉತ್ತರ ದಿಕ್ಕಿಗೆ ವಿಶಾಲವಾದ ಕೆರೆಯನ್ನು ನಿರ್ಮಿಸಿದನು. ಈ ಕೆರೆಯು ವಿಸ್ತೀರ್ಣದಲ್ಲಿ ಸುಮಾರು ೨೫ ಹೆಕ್ಟೇರುಗಳ ವ್ಯಾಪಿಸಿದ್ದು ಉದ್ದದಲ್ಲಿ ೧.೫ ಕಿ.ಮೀ. ವಿಸ್ತರಿಸಿದೆ. ಎತ್ತರದಲ್ಲಿ ೨೫ ಅಡಿಯನ್ನು ಹೊಂದಿದೆ. ಕೆರೆಯು ಕೈಗಾರಿಕೆ ಮತ್ತು ಕೃಷಿ ನೀರಾವರಿಗೆ ಸಹಾಯಕವಾಗಿವೆ.

**ಯುಡ್ಡಳಿಯ ಕೆರೆ**

ಯಾದಗಿರಿ ಪರಿಸರದ ದಕ್ಷಿಣ ದಿಕ್ಕಿಗೆ ಇವರ ಯಡ್ಡಳಿ ಎಂಬ ಗ್ರಾಮವು ಪ್ರಾಚೀನ (ಶಿಲಾಯುಗದ ಸಾಂಸ್ಕೃತಿಕ) ನೆಲೆಯಾಗಿದೆ. ಗ್ರಾಮದ ಪೂರ್ವದಕ್ಕಿಗೆ ವಿಶಾಲವಾದ ಕೆರೆಯನ್ನು ಹೊಂದಿದೆ. ಈ ಕೆರೆಯು ವಿಸ್ತೀರ್ಣದಲ್ಲಿ ೧೫ ಹೆಕ್ಟೆರ್‌ಗಳಷ್ಟು ವ್ಯಾಪಿಸಿದ್ದು, ಇದನ್ನು ಹೈದ್ರಾಬಾದಿನ ನಿಜಾಮನ ಅಧಿಕಾರ ಅವದಿಯಲ್ಲಿ ರಜಾಕಾರು ನಿರ್ಮಿಸಿದರೆಂದು (ಕ್ಷೇತ್ರಕಾರ್ಯ ಸಂದರ್ಶನ) ರಾಮಲಿಂಗಯ್ಯ ಸ್ವಾಮಿ ೫೬ ಯುಡ್ಡಳಿಗೆ ಅವರ ಅಭಿಪ್ರಾಯ.

**ಯರಗೋಳ ಕೆರೆ**

ಯಾದಗಿರಿ ಪರಿಸರದಿಂದ ಉತ್ತರ ದಿಕ್ಕಿಗೆ ಸುಮಾರು ೧೮ ಕಿ.ಮೀ. ಅಂತರದಲ್ಲಿರುವ

ಈ ಗ್ರಾಮವು ಕಲ್ಯಾಣಿ ಚಾಲುಕ್ಯರ ದೊರೆ ೨ನೆಯ ಜಯಸಿಂಹನ ಆಳ್ವಿಕೆಯಲ್ಲಿ ನಿರ್ಮಿಸಿದ ಐತಿಹಾಸಿಕ ಕೆರೆ ಹೊಂದಿದೆ. ಈ ಕೆರೆಯನ್ನು ಜಯಸಿಂಹನು ಕ್ರಿ.ಶ. ೧೦೧೯ ರಿಂದ ೧೦೩೨ರವರೆಗೆ ನಿರ್ಮಿಸಿದನು ಎಂದು ತಿಳಿದು ಬರುತ್ತವೆ.

ಈ ಕೆರೆಯು ವಿಸ್ತಾರದಲ್ಲಿ ಸುಮಾರು ೨೦೦ ಹೆಕ್ಟೇರಷ್ಟು ಪ್ರದೇಶವನ್ನು ಹೊಂದಿದೆ. ಪೂರ್ವ ದಿಕ್ಕಿನಿಂದ ಉತ್ತರ ದಕ್ಕಿಗೆ ವಿಶಾಲವಾಗಿದ್ದು ಸುಮಾರು ಎರಡು ಕಿ.ಮೀ. ಉದ್ದವಾಗಿದೆ. ಕೆರೆಯಕಟ್ಟೆಗೆ ಮೂರು ತೂಬುಗಳು ನಿರ್ಮಿಸಲಾಗಿದೆ. ಉತ್ತರದಲ್ಲಿ ೨೬ ಅಡಿಯಾಗಿದ್ದು ಕೃಷಿ ಮತ್ತು ನೀರಾವರಿಗೆ ಸಹಾಯಕವಾಗಿದೆ.

**ಚಂಡ್ರಕಿ ಗ್ರಾಮದ ಕೆರೆ**

ಯಾದಗಿರಿ ಪರಿಸರದ ಗುರುಮಿಟಕಲ್ ಎಂಬ ಪಟ್ಟಣದ ಪೂರ್ವ ದಿಕ್ಕಿಗೆ ಇರುವ ಚಂಡ್ರಕಿ ಎಂಬ ಗ್ರಾಮದಲ್ಲಿ ಪ್ರಾಚೀನ ಕಾಲದ ಐತಿಹಾಸಿಕ ಕೆರೆ ಇದೆ. ಆದರೆ ಕ್ರಿ.ಶ. ೧೨ನೆಯ ಶತಮಾನದಲ್ಲಿ ಕಾಕಳುವಾರು ಎಂಬ ಸಂಸ್ಥಾನದ ಅಧಿಕಾರ ಅವಧಿಯಲ್ಲಿ ನಿರ್ಮಾಣವಾಗಿದೆ. ಈ ಸಂಸ್ಥಾನದ ಪ್ರಮುಖ ಅರಸನಾದ ರಾಜ ಲಕ್ಷ್ಮಣಪ್ಪ ದೇಶಮುಖಿ ಅವರ ಆಳ್ವಿಕೆಯಲ್ಲಿ ಈ ಕೆರೆಯನ್ನು ನಿರ್ಮಿಸಲಾಯಿತು. ಕೆರೆಯು ವಿಸ್ತೀರ್ಣತೆಯಲ್ಲಿ ಸುಮಾರು ೩೫ ಹೆಕ್ಟೇರ್‌ರಷ್ಟು ವಿಶಾಲವಾಗಿ ವ್ಯಾಪಿಸಿದೆ. ಕಾಕಳುವಾರು ಅರಸ ರಾಜ ಲಕ್ಷ್ಮಣಪ್ಪ ದೇಶಮುಖಿನ್ನು ತನ್ನ ಅಧಿಕಾರದಲ್ಲಿ ಅನೇಕ ಕೆರೆಗಳು ಕಟ್ಟಿಸಿದನು. ಅದರಲ್ಲಿ ಚಂಡ್ರಕಿ ಎಂಬ ಗ್ರಾಮದಲ್ಲಿ ಕರೆ ಬಂದಾಗಿವೆ. ಇದು ಸುಮಾರು ೧೩ ಎಕರೆ ವಿಸ್ತೀರ್ಣದ ಸುತ್ತಲೂ ಮಣ್ಣಿನ ಕೋಟೆಯನ್ನು ಕಟ್ಟದನು. ಈ ಕೋಟೆಯ ಪೂರ್ವ ದಿಕ್ಕಿಗೆ ಸುಮಾರು ಎರಡು ಕಿ.ಮೀ. ಉದ್ದದ ಕೆರೆಯನ್ನು ನಿರ್ಮಿಸಿದನ್ನು ಕೆರೆಯು ಎತ್ತರದಲ್ಲಿ ३೭ ಅಡಿಯಾಗಿದ್ದು ಕೆರೆಗೆ ನಾಲು ತೊಬುಗಳನ್ನು ನಿರ್ಮಿಸಲಾಗಿದ್ದು ಕೆರೆಯು ಕೃಷಿ ಮತ್ತು ನೀರಾವರಿ ವ್ಯವಸ್ಥೆಗೆ ಅತ್ಯಾಅಮೂಲ್ಯವಾಗಿದೆ.

**ಕೇಶ್ವರ ಗ್ರಾಮದ ಕೆರೆ**

ಗುರುಮಿಟಕಲ್ ಪಟ್ಟಣದಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಕೇಶ್ವರ ಎಂಬ ಗ್ರಾಮದಲ್ಲಿ ಕಾಕಳುವಾರು ಸಂಸ್ಥಾನ ಕ್ರಿ.ಶ. ೧೨ನೆಯ ಶತಮಾನದಲ್ಲಿ ರಚನೆಯಾದ ಪ್ರತಿಯಾಗಿ ಕೆರೆ ಇದೆ. ಈ ಕೆರೆಯ ಪಕ್ಕದಲ್ಲಿ ಒಂದು ಬಸವೇಶ್ವರ ದೇವಸ್ಥಾನ ಇದ್ದು, ವಿಸ್ತೀರ್ಣದಲ್ಲಿ ಕೆರೆಯು ೨೦ ಹೆಕ್ಟೇರ್‌ಗಳು ವ್ಯಾಪಿಸಿದೆ. ಉದ್ದದಲ್ಲಿ ೧ ಕಿ.ಮೀ.ವಾಗಿದ್ದು ಈ ಕೆರೆಯನ್ನು ಸಂಸ್ಥಾನದ ಅರಸ ರಾಜ ಲಕ್ಷ್ಮಣಪ್ಪ ದೇಶಮುಖಿ ಅವರ ಆಳ್ವಿಕೆಯಲ್ಲಿ ನಿರ್ಮಿಸಲಾಯಿತು ಎಂದೂ ತಿಳಿದುಬರುತ್ತದೆ. ಈ ಕೆರೆಯು ಕೃಷಿ ಮತ್ತು ನೀರಾವರಿ ಸಹಾಯಕವಾಗಿದ್ದು ಮೂರು ತೊಬುಗಳನ್ನು ಹೊಂದಿದೆ. ಕೆರೆಯ ಕಟ್ಟೆಯ ಮೇಲೆ ಕೆಲವು ಸಮಾಧಿಗಳನ್ನು ಕಾಣಬಹುದಾಗಿದೆ.

## ಗಾಜರ ಕೋಟೆಯ ಕೆರೆ

ಗುರುಮಟಿಕಲ್ ಪಟ್ಟಣದ ಪಶ್ಚಿಮ ದಿಕ್ಕಿಗೆ ಇರುವ ಈ ಗ್ರಾಮವು ೧ನೆಯ ಶತಮಾನದಲ್ಲಿ ಕಾಕಳವಾರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಈ ಗ್ರಾಮದ ಪೂರ್ವ ದಿಕ್ಕಿಗೆ ವಿಶಾಲವಾದ ಕೆರೆಯನ್ನು ಈ ಸಂಸ್ಥಾನದ ಅರಸ ರಾಜ ಲಕ್ಷ್ಮಣಪ್ಪ ದೇಶಮುಖ ಅವರ ಅಧಿಕಾರ ಅವಧಿಯಲ್ಲಿ ಕಟ್ಟಲಾಯಿತು. ಕೆರೆಯನ್ನು ಕಟ್ಟುವ ಸಮಯದಲ್ಲಿ ಕಲ್ಯಾಣಿ ಕಲಚೂರಿ ಅರಸರ ಆಳ್ವಿಕೆಯಲ್ಲಿ ಬಸವಣ್ಣನ ನೇತೃತ್ವದಲ್ಲಿ ಕಲ್ಯಾಣಿ ಕ್ರಾಂತಿಯು ಪ್ರಾರಂಭವಾಯಿತು. ಅಂತಹ ಸ್ಥಿತಿಯಲ್ಲಿ ಸಂಸ್ಥಾನದ ಅರಸ ರಾಜ ವೀರಭದ್ರಪ್ಪ ದೇಶಮುಖನ್ನು ಈ ಕೆರೆಯನ್ನು ಪೂರ್ಣಗೊಳಿಸಿದೆ. ಕ್ರಾಂತಿಯನ್ನು ಹೋಗಲಾಡಿಸಲು ಸನ್ನತನಾದನ್ನೇ ಆದರೆ ಈತನ ಮರಣದ ನಂತರ ಇವನ ಮಗ ರಾಜ ಲಕ್ಷ್ಮಣಪ್ಪ ದೇಶಮುಖ, ಅಧಿಕಾರ ವಹಿಸಿಕೊಂಡು ಈ ಕೆರೆಯನ್ನು ಪೂರ್ಣಗೊಳಿಸಿದ. ಕೆರೆಯನ್ನು ಕಟ್ಟಿಸಿದ ಅರಸ ಆ ಕೆರೆಯ ಪಕ್ಕದಲ್ಲಿ ಶಂಕಲಿಂಗೇಶ್ವರ ದೇವಾಲಯವನ್ನು ನಿರ್ಮಿಸಿದನು ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬರುತ್ತದೆ. ಕೆರೆಯು ವಿಶಾಲವಾಗಿದ್ದು ಸುಮಾರು ೨೫ ಹೆಕ್ಟೇರರಷ್ಟು ವಿಸ್ತೀರ್ಣತೆಯನ್ನು ಹೊಂದಿದೆ. ಕೆರೆಯು ಪೂರ್ವದಿಂದ ಪಶ್ಚಿಮಕ್ಕೆ ಸುಮಾರು ಎರಡು ಕಿ.ಮೀ.ರಷ್ಟು ವ್ಯಾಪಿಸಿದೆ. ಉತ್ತರದಲ್ಲಿ ೩೪ ಅಡಿಯ ಇದೆ. ಕೆರೆಯ ಕಟ್ಟೆಗೆ ೪ ತೊಬುಗಳನ್ನು ನಿರ್ಮಿಸಲಾಗಿದ್ದು ಕೃಷಿ ಮತ್ತು ನೀರಾವರಿ ವ್ಯವಸ್ಥೆಗೆ ಸಹಾಯಕವಾಗಿದೆ.

## ಇಟ್ಕಲ್ ಗ್ರಾಮದ ಕೆರೆ

ಕಾಕಳವಾರ ಸಂಸ್ಥಾನದಿಂದ ಸುಮಾರು ೧೦ ಕಿ.ಮೀ. ಅಂತರದಲ್ಲಿ ಈ ಗ್ರಾಮವಿದೆ. ಈ ಸಂಸ್ಥಾನದ ಅರಸ ರಾಜ ವೀರಭದ್ರಪ್ಪ ದೇಶಮುಖ ಅವರ ಆಳ್ವಿಕೆಯಲ್ಲಿ ವಿಶಾಲವಾದ ಕೆರೆಯನ್ನು ನಿರ್ಮಿಸಲಾಗಿದೆ. ಈ ಕೆರೆಗೆ ಕಾಕಳು ಕೆರೆಯೆಂದು ಕರೆಯುತ್ತಾರೆ. ವಿಸ್ತೀರ್ಣದಲ್ಲಿ ೧೦ ಎಕರೆಯನ್ನು ಹೊಂದಿದ್ದು ಕೆರೆಯು ಎತ್ತರದಲ್ಲಿ ೨೦ ಅಡಿಯಾಗಿದೆ. ೧. ಕಿ.ಮೀ. ಉದ್ದವಾಗಿರುವ ಕೆರೆ ಎರಡು ತೂಬುಗಳು ನಿರ್ಮಿಸಲಾಗಿದೆ. ಈ ಕೆರೆಯ ಪರಿಸರದಲ್ಲಿ ಯಾವುದೇ ಶಾಸನಗಳು ಸ್ಮಾರಕಗಳು ಕಂಡು ಬರುವುದು ಕೃಷಿ ನೀರಾವರಿಗೆ ಉಪಯುಕ್ತವಾಗಿದೆ.

## ಅಸನಾಳ ಕೆರೆ

ಯಾದಗಿರಿ ಪರಿಸರದಿಂದ ಪೂರ್ವದಿಕ್ಕಿಗೆ ಇರುವ ಆಶನಾಳ ಎಂಬ ಗ್ರಾಮವು ಬಹು ಪ್ರಾಚೀನ ಕಾಲದ ಕೆರೆಯನ್ನು ಹೊಂದಿದ್ದು, ಈ ಕೆರೆಗೆ ಭೂತನ ಕೆರೆ ಎಂದೂ ಕರೆಯಲಾಗುತ್ತದೆ. ಈ ಕೆರೆಯನ್ನು ಕಲ್ಯಾಣಿ ಚಾಲುಕ್ಯರ ದೊರೆ ಎರಡನೆಯ ಜಯಸಿಂಹನ ಆಳ್ವಿಕೆಯ ಕ್ರಿ.ಶ. ೧೦೧೯ರಿಂದ ೧೦೩೭ರಲ್ಲಿ ತನ್ನ ಆಡಳಿತ ವರ್ಗದ ಅಧಿಕಾರಿಯಾದ ಭೂತನ ಎಂಬ ವ್ಯಕ್ತಿಯಿಂದ ನಿರ್ಮಿತವಾಯಿತು

ಎಂದು (ರಾಮಣ ಹೆಚ್. ಮೇದಾ ೨೭, ಆಶನಾಳ) ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೆರೆಯು ವಿಶಾಲವಾಗಿದ್ದು ಸುಮಾರು ೩೫ ಎಕರೆಯ ಪ್ರದೇಶವನ್ನು ವಿಸ್ತರಣವನ್ನು ಹೊಂದಿದೆ. ಕೆರೆಯು ಉತ್ತರದಿಂದ ದಕ್ಷಿಣಕ್ಕೆ ಸುಮಾರು ಎರಡು ಕಿ.ಮೀ. ವ್ಯಾಪಿಸಿದೆ. ಈ ಕೆರೆಗೆ ನಾಲ್ಕು ತೂಬಿಗಳನ್ನು ನಿರ್ಮಿಸಲಾಗಿದ್ದು, ಕೃಷಿ ಮತ್ತು ನೀರಾವರಿಗೆ ಉಪಯುಕ್ತವಾಗಿದೆ. ಈ ಕೆರೆಯ ಪರಿಸರದಲ್ಲಿ ಶಾಸನಗಳು ಮತ್ತು ಸ್ಮಾರಕಗಳು ಕಂಡುಬರುವುದಿಲ್ಲ.

**ಲಿಂಗೇರಿ ಮತ್ತು ಮುಸ್ಟೋರ ಕೆರೆ**

ಯಾದಗಿರಿ ಪರಿಸರದಿಂದ ದಕ್ಷಿಣ ದಿಕ್ಕಿಗೆ ಇರುವ ಲಿಂಗೇರಿ ಮತ್ತು ಮುಸ್ಟೋರ ಗ್ರಾಮಗಳ ಮಧ್ಯ ಆಧುನಿಕವಾಗಿ ನಿಜಾಮನ ಅಧಿಕಾರ ಅವಧಿಯಲ್ಲಿ ನಿರ್ಮಾಣವಾಗಿರುವ ಕೆರೆ ಕಂಡುಬರುತ್ತದೆ. ಈ ಕೆರೆಯನ್ನು ಹೈದ್ರಾಬಾದಿನ ನಿಜಾಮನ ಆಡಳಿತದ ರಜಾಕಾರರ ಅಧಿಕಾರಿಯಾದ ಮುಸ್ತಾಬ ಎಂಬುವವರು ನಿರ್ಮಿಸಿದ್ದರಿಂದ ಈ ಗ್ರಾಮಕ್ಕೆ ಮುಸ್ಟೋರ ಎಂದು ಹೆಸರು ಬಂತು ಎಂದು ಭೀಮರಾಯ ಲಿಂಗೇರಿಯವರು ಅಭಿಪ್ರಾಯಪಟ್ಟಿದ್ದಾರೆ. ಈ ಕೆರೆಯು ಸುತ್ತಳತೆಯ ವಿಸ್ತೀರ್ಣದಲ್ಲಿ ಸುಮಾರು ೨೫ ಹೆಕ್ಟೇರ್‌ಷ್ಟು ವ್ಯಾಪಿಸಿದ್ದು ಪೂರ್ವದಿಂದ ಪಶ್ಚಿಮಕ್ಕೆ ೧.೫. ಕಿ.ಮೀ. ಉದ್ದವನ್ನು ಹೊಂದಿದೆ. ಎತ್ತರದಲ್ಲಿ ೨೯ ಅಡಿಯಾಗಿದ್ದು, ಕೃಷಿ ಮತ್ತು ನೀರಾವರಿ ವ್ಯವಸ್ಥೆಗೆ ಸಹಾಯಕವಾಗಿದೆ. ಕೆರೆಯ ಪರಿಸರದಲ್ಲಿ ಶಾಸನಗಳು ಮತ್ತು ಸ್ಮಾರಕಗಳು ಕಂಡುಬರುವುದಿಲ್ಲ.

**ಮುದ್ನಾಳ ಗ್ರಾಮದ ಕೆರೆ**

ಯಾದಗಿರಿ ಪರಿಸರದಿಂದ ಉತ್ತರ ದಿಕ್ಕಿಗೆ ಸುಮಾರು ೫ ಕಿ.ಮೀ. ಅಂತರದಲ್ಲಿರುವ ಮುದ್ನಾಳ ಗ್ರಾಮದಲ್ಲಿ ಪ್ರಾಚೀನ ಕಾಲದ ಐತಿಹಾಸಿಕ ಕೆರೆಯನ್ನು ಹೊಂದಿದ ಕಲ್ಯಾಣಿ ಚಾಲುಕ್ಯರ ದೊರೆ ೩ನೆಯ ಜಯಸಿಂಹನ ಆಳ್ವಿಕೆಯ ಕ್ರಿ.ಶ. ೧೦೧೯ರಿಂದ ೧೦೩೩ರಲ್ಲಿ ಈ ಕೆರೆಯನ್ನು ಕಟ್ಟಿದನು ಎಂದು ತಿಳಿದುಬರುತ್ತದೆ. ಈ ಕೆರೆಯು ವಿಸ್ತಿರಣದಲ್ಲಿ ೨೪ ಹೆಕ್ಟೇರಷ್ಟು ಪ್ರದೇಶವನ್ನು ವ್ಯಾಪಿಸಿದ್ದು ದಕ್ಷಿಣದಿಂದ ಉತ್ತರಕ್ಕೆ ೧.೫ ಕಿ.ಮೀ. ಉದ್ದವಾಗಿರುತ್ತದೆ. ೨೮ ಅಡಿ ಎತ್ತರದಲ್ಲಿ ಇದ್ದು ಕೆರೆ ಕಟ್ಟೆಗೆ ಮೂರು ತೂಬಿಗಳನ್ನು ನಿರ್ಮಿಸಲಾಗಿದೆ. ಈ ಕೆರೆಯ ಪರಿಸರದಲ್ಲಿ ಶಾಸನಗಳು ಮತ್ತು ಸ್ಮಾರಕಗಳು ಕಂಡುಬರುವುದಿಲ್ಲ. ಕೃಷಿ ಮತ್ತು ಕೈಗಾರಿಕೆ, ನೀರಾವರಿ ವ್ಯವಸ್ಥೆಯಲ್ಲಿ ಉಪಯುಕ್ತವಾಗಿದೆ. (ಚಂದ್ರಪ್ಪ ಕೌಲಗಿ, ೪೮, ಮುದ್ನಾಳ)

**ಅಲ್ಲಿಪೂರ ಗ್ರಾಮದ ಕೆರೆ:**

ಯಾದಗಿರಿ ಪರಿಸರದಿಂದ ಉತ್ತರ ದಿಕ್ಕಿಗೆ ಸುಮಾರು ೧೫ ಕಿ.ಮೀ. ಅಂತರದಲ್ಲಿರುವ ಈ ಗ್ರಾಮವು ಹೈದ್ರಾಬಾದ ಸಂಸ್ಥಾನ ಅರಸ ಬುರುಜ ಅಲಿಖಾನ ಕ್ರಿ.ಶ. ೧೭೮೪ರಲ್ಲಿ ಯಾದಗಿರಿ ಪರಿಸರಕ್ಕೆ ಭೇಟಿ ನೀಡಿದಾಗ ಇತರ ಅಧಿಕಾರಿಯಾದ ಅಲಿಖಾನ್ ಎಂಬುವರ ನೇತೃತ್ವದಲ್ಲಿ ಈ

ಪರಿಸರದಲ್ಲಿ ಒಂದು ವಿಶಾಲವಾದ ಕೆರೆಯನ್ನು ನಿರ್ಮಿಸಲಾಯಿತು. ಕೆರೆಯು ವಿಸ್ತೀರ್ಣದಲ್ಲಿ ೨೫ ಹೆಕ್ಟೇರ್‌ಷ್ಟು ವ್ಯಾಪಿಸಿದ್ದು, ದಕ್ಷಿಣದಿಂದ ಪಶ್ಚಿಮಕ್ಕೆ ೧.೫ ಕಿ.ಮೀ. ವಿಸ್ತರಿಸಲಾಗಿದೆ. ಕೆರೆಯ ಕಟ್ಟೆಗೆ ಮೂರು ತೂಬುಗಳನ್ನು ನಿರ್ಮಿಸಲಾಗಿದ್ದು, ಕೃಷಿ ಮತ್ತು ನೀರಾವರಿಗೆ ಉಪಯುಕ್ತವಾಗಿದೆ. ಕೆರೆಯ ಪರಿಸರದಲ್ಲಿ ಶಾಸನಗಳು ಮತ್ತು ಸ್ಮಾರಕಗಳು ಕಂಡುಬರುವುದಿಲ್ಲ.

ಯಾದಗಿರಿ ಪರಿಸರದ ಈ ಎರಡು ಹೋಬಳಿಗಳಲ್ಲಿ ಸುಮಾರು ೩೧ ಕೆರೆಗಳು ನಿರ್ಮಾಣವಾಗಿದ್ದು, ಕೆರೆಗಳನ್ನು ಕಲ್ಯಾಣಿ ಚಾಲುಕ್ಯರ ದೊರೆ ೩ನೆಯ ಜಯಸಿಂಹ ಕಲಚೂರಿ ಅರಸ ಬಿಜ್ಜಳ ಬಿಜಾಪೂರದ ಸುಲ್ತಾನರು ಹೈದ್ರಾಬಾದಿನ ನಿಜಾಮ ಅರಸು ಮನೆತನಗಳಲ್ಲಿ ಅನೇಕ ಕೆರೆಗಳು ನಿರ್ಮಿಸಲಾಯಿತು. ಮತ್ತು ೧೨ನೆಯ ಶತಮಾನದ ಕಾಕಲುವಾರ ಸಂಸ್ಥಾನದ ಅರಸರ ಕಾಲದಲ್ಲಿ ಕೆಲವು ಕೆರೆಗಳು ನಿರ್ಮಾಣವಾದವು ಎಂದೂ ತಿಳಿದುಬರುತ್ತದೆ. ಇನ್ನುಳಿದ ಅನೇಕ ಕೆರೆಗಳು ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳಾದ ಶ್ರೀ ದೇವರಾಜ ಅರಸರ ಅಧಿಕಾರವಧಿ ೧೯೭೧ರಿಂದ ೧೯೭೫ರ ಅವಧಿಯಲ್ಲಿ ನಿರ್ಮಿಸಲಾಯಿತು.

ಒಟ್ಟಿನಲ್ಲಿ ಪ್ರಾಚೀನ ಮತ್ತು ಮಧ್ಯಕಾಲದ ವೇಳೆಯಲ್ಲಿ ಹೆಚ್ಚು ಕೆರೆ ಕಟ್ಟೆಗಳು ಈ ಪ್ರದೇಶದಲ್ಲಿ ನಿರ್ಮಾಣವಾದವು. ಅಂದು ಅರಸರು ಅಧಿಕಾರಿ ವರ್ಗಗಳು ಕೃಷಿ ನಿರಾವರಿಗೆ ಹೆಚ್ಚಿನ ಉತ್ತೇಜನ ನೀಡಿದಂತಾಗಿದೆ. ಒಂದೊಂದು ಊರಿಗೆ ಜನರಿಗೆ ಸಾಕು ಪ್ರಾಣಿಗಳಿಗೆ ಅನುಕೂಲವಾಗಿರಲಿ ಎಂಬ ದೃಷ್ಟಿ ಕೋನದ ಹಿನ್ನೆಲೆಯಲ್ಲಿ ಅಂದು ಅನೇಕ ಕೆರೆಗಳು ನಿರ್ಮಾಣವಾದವು. (ಕೆರೆಯನ್ನು ಕಟ್ಟಿಸಿ ಬಾವಿಯ ತೋಡಿಸು) ಕಲ್ಯಾಣಿ ಅರಸರ ಕಾಲದಲ್ಲಿ ಸುಲ್ತಾನರ ಮತ್ತು ನಿಜಾಮನ ಆಳ್ವಿಕೆಯಲ್ಲಿ ಅಂದು ಅಧಿಕ ಕೆರೆಕಟ್ಟೆಗಳು ಈ ಪರಿಸರದಲ್ಲಿ ನಿರ್ಮಾಣವಾದವು. ಅವುಗಳು ಇಂದಿಗೂ ಜನ ಉಪಕಾರಿಗಾಗಿ ಕೃಷಿ ಭೂಮಿಗೆ ಸಹಾಯಕವಾಗಿ ಹಲವು ಹೆಕ್ಟೇರ್ ಪ್ರದೇಶಗಳಿಗೆ ನೀರುಣಿಸುವ ಸಾಮರ್ಥ್ಯವನ್ನು ಈ ಕೆರೆಗಳು ಪಡೆದಿವೆ.

### ೪.೩. ನೀರಾವರಿ ವ್ಯವಸ್ಥೆ

ನೀರು ಪಂಚಭೂತಗಳಲ್ಲಿ ಒಂದು. ವಿಶ್ವದಲ್ಲಿರುವ ಕೋಟ್ಯಾಂತರ ಜೀವರಾಶಿಗಳಿಂದ ಸಸ್ಯವರ್ಗ ಮತ್ತು ಪ್ರಾಣಿ ವರ್ಗಗಳಿಗೆ ಅತ್ಯಂತ ಪ್ರಮುಖವಾದ ಅಂಶ. ನೀರಿನಿಂದಲೇ ಜೀವಿಗಳ ಉಗಮವಾಗಿದೆ. ವಿಶ್ವದ ಬಹುತೇಕ ಪಾಲು ನೀರಿನಿಂದ ಆವೃತಗೊಂಡಿದ್ದು, ಭೂಭಾಗವು ಕೇವಲ ೧/೩ರಷ್ಟು ಮಾತ್ರ ಇದ್ದು, ಮಾನವನ ದೇಹದಲ್ಲಿ ಸುಮಾರು ಶೇಕಡಾ ೭೨% ರಷ್ಟು ನೀರಿನಿಂದ ಕೂಡಿದ್ದು ಸಹಜ. ಇಂತಹ ವಸ್ತುವಿನಿಂದ ನೀರು ಮಾನವನ ದೈನಂದಿನ ಚಟುವಟಿಕೆಗಳಲ್ಲಿ ಹಾಸು ಹೊಕ್ಕಿದೆ. ಮಾನವನು ಶಿಲೆಗಳಿಂದ ಆಯುಧಗಳನ್ನು ತಯಾರಿಸಿಕೊಂಡು ಬೇಟೆಯಾಡುತ್ತಾ ಜೀವನ ನಡೆಸುತ್ತಿದ್ದ ಇವನ ಚಟುವಟಿಕೆಗಳ ಕಾರ್ಯಕ್ಷೇತ್ರವು

ಸರೋವರ ಕೆರೆ, ನದಿ ತೊರೆಗಳ ಸಮೀಪದಲ್ಲಿ ಕೇಂದ್ರೀಕೃತವಾಗಿತ್ತು. ಇದಕ್ಕೆ ಪೂರಕವಾಗಿ ನಡೆಸಿದಂತಹ ಅನೇಕ ಸಂಶೋಧನೆ ಇದರಿಂದ ಮಾನವನಿಗೆ ನೀರು ಎಷ್ಟು ಉಪಯೋಗವೆಂಬುದು ವೇದ್ಯವಾಗುತ್ತವೆ. ಆರಂಭ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವನು ಒಂದು ಕಡೆ ನೆಲೆಸಲು ಆರಂಭಿಸಿದನ್ನು ಈ ಹಂತವನ್ನು ಪ್ರಾಕ್ತನ ಶಾಸ್ತ್ರಜ್ಞರು ನೂತನ ಶಿಲಾಯುಗದ ಕಾಲ ಎಂದೂ ಕರೆದಿದ್ದಾರೆ. ಈ ಕ್ರಾಂತಿಯ ಪರಿಣಾಮವಾಗಿ ಬಹಳಷ್ಟು ಸುಧಾರಣೆ ಮಾಡಿದ್ದು ಕೃಷಿ ಜೀವನವನ್ನು ಪ್ರಾರಂಭಿಸಿದ. ಈ ಕೃಷಿ ಜೀವನವು ಸುಧಾರಣೆಗೊಳ್ಳುತ್ತಾ ಪ್ರಾಣಿಗಳನ್ನು ಸಾಕಲಾರಂಭಿಸಿ ಅವುಗಳು ಸಹಾಯದಿಂದ ವ್ಯವಸಾಯ ಮಾಡಲು ತೊಡಗಿಸಿಕೊಂಡುನು. ವ್ಯವಸಾಯಕ್ಕೆ ಕೆರೆಕಟ್ಟೆಗಳನ್ನು ಕಟ್ಟಲು ಪ್ರಾರಂಭಿಸಿದನು.

**ಕೆರೆಯ ನೀರಾವರಿ:** ಮಾನವನು ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಅವನು ಮಳೆಯನ್ನು ನಂಬಿದ್ದ. ಅವನು ವಿಪುಲವಾಗಿ ನೀರು ಸಿಗುವ ಜಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಸಕಾಲದ ಮಳೆಯ ವೈಫುಲ್ಯತೆಯು ಅವನನ್ನು ಆಗಿಂದ್ದಾಗ್ಗೆ ಕಷ್ಟಕ್ಕೆ ಒಳಪಡಿಸಿತ್ತು.

"ಇದರಿಂದ ಅವನು ನೀರನ್ನು ಸಂಗ್ರಹ ಮಾಡಿ ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿ ತೊಡಗಿದ ಮಳೆಗಾಲವು ಕೆಲವು ಮಾಸಗಳ ಮಾತ್ರ ಇರುತ್ತಿತ್ತು. ಅದರಂತೆಯೇ ನದಿಯಿಂದ ಕೆಲವು ಸಾವಿರ ಎಕರೆಗಳಷ್ಟು ಭೂ ಪ್ರದೇಶವು ವ್ಯವಸಾಯಕ್ಕೆ ಒಳಪಟ್ಟಿದ್ದವು."[೧೧]

ಅದರಿಂದ ಅವನು ಎಲ್ಲಾ ಮೂಲಗಳಿಂದ ನೀರನ್ನು ಸಂಗ್ರಹಿಸಿಟ್ಟುಕೊಂಡು ಅಗತ್ಯವಿದ್ದಾಗ ಅತ್ಯಂತ ಸಮರ್ಪಕವಾಗಿ ಬಳಸಿಕೊಳ್ಳ ತೊಡಗಿದರು. ಇಂತಹ ಕೃತಕ ಸಂಗ್ರಕಗಳೇ ಕೆರೆಗಳು ಮತ್ತು ಕಟ್ಟೆಗಳು ಕೆರೆಗಳು ನಿರ್ಮಾಣದಿಂದ ಮಾನವನ್ನು ತನ್ನಗೆ ಬೇಕೆಂದಾಗ ನೀರನ್ನು ಉಪಯೋಗಿಸಿಕೊಂಡು ವ್ಯವಸಾಯ ಮಾಡತೊಡಗಿದನ್ನು ಈ ಪರಿಸರವು ಪ್ರಾಚೀನ ಕರ್ನಾಟಕವನ್ನು ಆಳ್ವಿಕೆ ಮಾಡಿದ ಕೆಲವು ಮನೆತನಗಳಾದ ಮೌರ್ಯರು, ಶಾತವಾಹನರು ರಾಷ್ಟ್ರಕೂಟರು ಮತ್ತು ಕಲ್ಯಾನ ಚಾಲುಕ್ಯರು, ಕಲಚೂರಿ ಅರಸರು ಹಾಗೂ ಕಾಕಲುವಾರು ಅರಸರು ಮತ್ತು ಬಹುಮನಿ ಸುಲ್ತಾನರು, ವಿಜಯನಗರದ ಅರಸರು ಹಾಗೂ ವಿಜಾಪುರದ ಆದಿಲ್‌ಷಾಹಿಗಳು ಮತ್ತು ಕೆರೆಗಳು ನಿರ್ಮಾಣವಾದವು. ಕಲ್ಯಾಣ ಚಾಲುಕ್ಯರ ದೊರೆ ೩ನೆಯ ಜಯಸಿಂಹನೇ ಅಧಿಕಾರಾವಧಿಯ ಹದಿನಾಲ್ಕು ವರ್ಷಗಳಲ್ಲಿ ಕೃಷಿ ನೀರಾವರಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದನು ಎಂತೂ ಎತಗಿರಿ ಶಾಸನದಿಂದ ತಿಳಿದುಬರುತ್ತದೆ.

ಹತ್ತನೆಯ ಶತಮಾನದ ಕೊನೆಯ ಕಾಲುಭಾಗದಿಂದ ಹದಿನಾಲ್ಕನೆಯ ಶತಮಾನದ ನಾಲ್ಕನೆಯ ದಶಕದವರೆಗಿನ ಕಾಲ ಸುಮಾರು ೨೫೦ ಕೆರೆಗಳು ನಿರ್ಮಾಣ ಸುವರ್ಣ

ಯುಗವಾಗಿತ್ತೆಂದು ಈ ಹಿನ್ನೆಲೆಯಲ್ಲಿ ಯಾದಗಿರಿ ಪರಿಸರದ ಕೆರೆಗಳು ಗಮನಿಸಿದಾಗ ಕಲ್ಯಾಣ ಚಾಲುಕ್ಯರು ಅಧಿಕಾರಾವಧಿಯಲ್ಲಿ ನೀರಾವರಿಗಾಗಿ ನಿರ್ಮಿಸಲಾಯಿತು ಎಂದೂ ಉಲ್ಲೇಖವಾಗಿದೆ. ಈ ಪರಿಸರದ ಕೆರೆಗಳಾದ ಯಾದಗಿರಿಯ ಕೆರೆ, ಯಾದಗಿರಿಯ ಪೂರ್ವದ ಕೆರೆ, ಯರಗೋಳ ಗ್ರಾಮದ ಕೆರೆ, ರಾಮನಸಮುದ್ರ ಕೆರೆ, ಮೈಲಾಪೂರದ ಕೆರೆ, ಹಳಗೇರಾ ಕೆರೆ, ಅರಕೇರಾ ಕೆರೆ, ಮುಸ್ಪೋರ್ ಕೆರೆ, ಅಲ್ಲಪೂರ ಕೆರೆ, ಚಂದ್ರಕಿ ಕೆರೆ, ಕೇಶ್ವಾರ ಗ್ರಾಮದ ಕೆರೆ, ಪುಟಪಾಗ ಕೆರೆ, ಗಾಜರ ಕೋಟೆಯ ಕೆರೆ, ಇಟ್ಕಲ್ ಕೆರೆ, ಅಬ್ಬೆ ತುಮಕೂರು ಕೆರೆ, ಠಾಣಗುಂದಿ ಕೆರೆ, ಕಂಚಕನಹಳ್ಳಿ ಕೆರೆ, ವರುಂಚಾಕೆರೆ, ವಡ್ಡನಹಳ್ಳಿ ಕೆರೆ, ವರ್ಕನಳ್ಳಿ ಕೆರೆ, ಮುಸ್ಕನಹಳ್ಳಿ ಕೆರೆ, ಎಂಪಾಡ ಕೆರೆ, ಶಿವಪೂರ ಕೆರೆ, ಮುಂಡರಗಿ ಕೆರೆ, ಹೊಸಳ್ಳಿ ಕೆರೆ, ಗೌಡಗೇರಾ ಕೆರೆ ಕಾನಕೆರೆ, ಆಪನ್‌ಕೆರೆ ಮತ್ತು ಬಂದಳಿ ಗ್ರಾಮದ ಕೆರೆಗಳಿಂದ ಈ ಪರಿಸರವನ್ನು ಆಳ್ವಿಕೆ, ಮಾಡಿದ ಅರಸ ಮನೆತನಗಳು ನೀರಾವರಿಗೆ ಆದ್ಯತೆಯನ್ನು ನೀಡಿ ಕೆರೆಗೆಳನ್ನು ನಿರ್ಮಿಸಲಾಯಿತು ಮತ್ತು ಕರ್ನಾಟಕ ಮುಖ್ಯಮಂತ್ರಿಗಳಾದ ಶ್ರೀ. ದೇವರಾಜ ಅರಸನು ತನ್ನ ಅವಧಿಯಲ್ಲಿ ಈ ಪರಿಸರವನ್ನು ಕೆಲವು ಕೆರೆಗಳನ್ನು ನಿರ್ಮಿಸಿ ನೀರಾವರಿ ವ್ಯವಸ್ಥೆಗೆ ಉತ್ತೇಜನ ನೀಡಿದನು.

ಈ ಪರಿಸರದಲ್ಲಿ ಜನರು ಇಂದಿಗೆ, ನೀರಾವರಿ ಮಾಡಿಕೊಂಡು ೧೩,೮೬,೮೬೭ ಹೆಕ್ಟೇರಷ್ಟು ಪ್ರದೇಶ ನೀರಾವರಿಯನ್ನು ಹೊಂದಿದ್ದಾರೆ. ಈ ಕೆರೆಗಳು ಒಂದೊಂದು ಸಲ ಬೇಸಿಗೆಯಲ್ಲಿ ಬಿತ್ತಿ ಹೋಗಿ ನೀರಿನ ಅಭಾವ ಕಡಿಮೆಯಾಗುತ್ತದೆ.

**ಬಾವಿ ಮತ್ತು ಹಳ್ಳಗಳಿಂದ ನೀರಾವರಿ**

ಯಾದಗಿರಿ ಪರಿಸರದಲ್ಲಿ ಕೆರೆಗಳಲ್ಲದೆ ಅನೇಕ ಬಾವಿಗಳು ನಿರ್ಮಾಣವಾದವು. ಬಾವಿಗಳಲ್ಲಿ ಅಂತರ್ಜಲ ನೀರು ಸದಾ ದೊರಕುತ್ತಿತ್ತು. ಈ ವಿಧವಾದ ಬಾವಿ ನೀರಾವರಿಯನ್ನು ಈ ಪರಿಸರದಲ್ಲಿ ಕಲ್ಯಾಣಿ ಚಾಲುಕ್ಯರು ಆರಂಭಿಸಿದರು. ಇಂತಹ ನೀರಾವರಿಯ ಕಾರ್ಯ ಸ್ಥಳೀಯ ಮತ್ತು ನಿರ್ದಿಷ್ಟ ಪ್ರಮಾಣದಲ್ಲಿ ಮಾತ್ರ ಸಾಧ್ಯವಾಗುತ್ತಿತ್ತು. ಈ ಬಾವಿಗಳು ಕೇವಲ ನೀರಾವರಿಯಲ್ಲದೆ ಜನರ ನಿತ್ಯೋಪಯೋಗಕ್ಕೆ ಸಹಾಯಕವಾಗಿದ್ದವು. ಈ ನೀರನ್ನು ಕುಡಿಯಲು ಸಹ ಉಪಯೋಗಿಸುತ್ತಿದ್ದರು.

ಬಾವಿಗಳು ಅಧಿಕ ಪ್ರಮಾಣದಲ್ಲಿ ನೀರಿನ ಸಾಮರ್ಥ್ಯ ಹೊಂದಿದ್ದು ಸಾಮಾಜಿಕ ಮತ್ತು ಧಾರ್ಮಿಕವಾಗಿ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ. ಈ ಪರಿಸರದಲ್ಲಿ ಬಾವಿಗಳಿಂದಲೂ ವ್ಯವಸಾಯ ಮಾಡುತ್ತಿದ್ದರು. ಏತನೀರಾವರಿ ಪದ್ಧತಿಯಿಂದ ನೀರನ್ನು ಮೇಲಕ್ಕೆ ಎಳೆಯಲಾಗುತ್ತಿತ್ತು.

ಒಬ್ಬ ವ್ಯಕ್ತಿ ಮತ್ತು ಒಂದು ಜೊತೆ ಎತ್ತುಗಳ ಸಹಾಯದಿಂದ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ನೀರನ್ನು ಎಳೆಯಲಾಗುತ್ತಿತ್ತು. ಇದರಿಂದ ಬೆಳೆಗಳನ್ನು ಬೆಳೆಯುತ್ತಿದ್ದರು.

ಕಲ್ಯಾಣಿ ಚಾಲುಕ್ಯರು, ಕಾಕಲುವಾರು ದೊರೆಗಳು ಮತ್ತು ಹೈದ್ರಾಬಾದಿನ ನಿಜಾಮನ ಆಳ್ವಿಕೆಯಲ್ಲಿ ನಿರ್ಮಿಸಲಾದ ಯಾದಗಿರಿ ಉತ್ತರ ದಿಕ್ಕಿಗೆ ಇರುವ ಬಾವಿ, ರಾಮಸಮುದ್ರ ಗ್ರಾಮದ ದಕ್ಷಿಣ ದಿಕ್ಕಿಗೆ ಇರುವ ಬಾವಿ, ಯರಗೋಳ ಗ್ರಾಮದ ಪೂರ್ವ ದಿಕ್ಕಿಗೆ ಇರುವ ಬಾವಿ, ಗುರುಮಿಟಕಲ್‌ನಲ್ಲಿ ಇರುವ ಬಾವಿ ಮತ್ತು ಚಂದ್ರಕಿ ಗ್ರಾಮದ ಬಾವಿಗಳನ್ನು ಕೃಷಿ ನೀರಾವರಿಗೆ ಉಪಯೋಗಿಸಿಕೊಳ್ಳಲಾಯಿತು.

ಯಾದಗಿರಿ ಪರಿಸರದ ರೈತರು ಪ್ರಾಚೀನ ಕಾಲದಲ್ಲಿ ಅತಿ ಹೆಚ್ಚಿನ ನೀರಾವರಿಯನ್ನು ಹಳ್ಳಗಳ ಮೂಲಕ ಉಪಯೋಗಿಸಿಕೊಂಡಿರುವುದನ್ನು ಕಾಣಬಹುದು. ಯಾದಗಿರಿಯ ಪರಿಸರದ ಪಶ್ಚಿಮ ದಿಕ್ಕಿಗೆ, ಹಾದುಹೋಗುವ ಭೀಮಾನದಿಗೆ, ಸೇರುವ ಹಳ್ಳದ ಮೂಲಕ ನೀರಾವರಿ ವ್ಯವಸ್ಥೆಯನ್ನು ಹೊಂದಿದ್ದರು. ಈ ಹಳ್ಳವು ಇಂದಿಗೂ ಜಲಾನಸಯ ವಿಸ್ತೀರ್ಣ ೧೦೬ ಚ.ಕಿ.ಮೀ. ಇದ್ದು ದೊರಕಬಹುದಾದ ನೀರಿನ ಪ್ರಮಾಣ ೨೬.೨೬ ಎಂ.ಎಂ.ಕ್ಯೂಬ್ ಇದೆ. ಈ ಜಲಾಶಯದಿಂದ ೨:೧ಳ೫ ಹೆಕ್ಟೇರಗಳಷ್ಟು ಪ್ರದೇಶವು ಪಂಪ್‌ಸೆಟ್‌ಗಳನ್ನು ಕೂಡಿಸಿ ನೀರಾವರಿ ಮಾಡಿಕೊಂಡಿದ್ದಾರೆ. ಸದಾ ಯಾವ ಕಾಲಕ್ಕೂ ನಿರಂತರವಾಗಿ ಹರಿಯುತ್ತಿರುವ ಈ ಹಳ್ಳದಿಂದ ಯಾದಗಿರಿ ಪರಿಸರದ ಗ್ರಾಮಗಳಾದ ಯಡ್ಡಳ್ಳಿ, ಚಾಮನಳ್ಳಿ, ಬಂದಳ್ಳಿ ಹಾಗೂ ಇತರೆ ಗ್ರಾಮಗಳು ನೀರಾವರಿ ವ್ಯವಸ್ಥೆಯನ್ನು ಹೊಂದಿದ್ದಾರೆ. ಈ ಹಳ್ಳವನ್ನು ಜನರು ಹಿರೇಹಳ್ಳ ಎಂದೂ ಕರೆಯುತ್ತಾರೆ. ಮಾಸ್ತುರು ಎಂಬ ಗ್ರಾಮದ ಪಶ್ಚಿಮಾಭಿಮುಖವಾಗಿ ಹರೆದು ಭೀಮಾನದಿಯನ್ನು ಸೇರುವ ಹಳ್ಳದಿಂದ ಅನೇಕ ರೈತರು ನೀರಾವರಿ ಪಂಪ್‌ಸೆಟ್ ಕೂಡಿಸಿಕೊಂಡು ಕೃಷಿ ನೀರಾವರಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಹಳ್ಳದಲ್ಲಿ ಉಪ್ಪು ಸಿಗುವುದು ವೈಶಿಷ್ಟ್ಯವಾಗಿದೆ.

### ಭೀಮಾ ನದಿಯ ಪರಿಸರದಲ್ಲಿ ನೀರಾವರಿ

ಈ ನದಿ ಪರಿಸರದಲ್ಲಿ ಪ್ರಾಚೀನ ಕಾಲದಲ್ಲಿ ಶಿಲಾಯುಗ ಸಂಸ್ಕೃತಿಯ ಅನೇಕ ಕುರುಹುಗಳು ದೊರಕಿದ್ದು, ಶಿಲಾ ಸಂಸ್ಕೃತಿಯು ಮಾನವನಿಗೆ ನೀರಾವರಿಯ ತಾಣವಾಗಿತ್ತು ಎಂದೂ ತಿಳಿದುಬರುತ್ತದೆ. ನಂತರ ಕಲ್ಯಾಣಿ ಚಾಲುಕ್ಯರು ಈ ಪರಿಸರದಲ್ಲಿ ತಮ್ಮ ರಾಜಧಾನಿ ಮಾಡಿಕೊಂಡಾಗ ಭೀಮಾ ನದಿಯನ್ನು ಬಳಸಿಕೊಂಡು ಕೃಷಿ ನೀರಾವರಿಯನ್ನು ಮಾಡಿದರು ಎಂದೂ ಈ ಪರಿಸರದ ಶಾಸನಗಳು ಸಾಕ್ಷಿಯಾಗಿವೆ. ಚಾಲುಕ್ಯರ ಅಧಿಕಾರ ಅವಧಿಯಲ್ಲಿ ಪರಿಸರದ ಗ್ರಾಮ ಅಬ್ಬೆತುಮಕೂರು ಹೇಡಗಿ ಮದ್ರಿ ಭೀಮನಳ್ಳಿ ಸಾಪುರ ಮತ್ತು ಲಿಂಗೇರಿ ಮುಸ್ಸೂರು ಬೆಳಗುಂದಿ ಮುಂತಾದ ಗ್ರಾಮಗಳು ನದಿ ಪರಿಸರದಲ್ಲಿದ್ದು ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ಭೀಮಾನದಿಯ ನೀರನ್ನು ಉಪಯೋಗಿಸಿಕೊಂಡು ಕೃಷಿಯಲ್ಲ ತೊಡಗಿಸಿಕೊಂಡು ನೀರಾವರಿ ವ್ಯವಸ್ಥೆಯನ್ನು ಮಾಡಿಕೊಂಡು ಬಂದಿದ್ದಾರೆ.

ಒಟ್ಟು ಈ ಪರಿಸರವು ನೀರಾವರಿಯನ್ನು ವಿವಿಧ ಮೂಲಗಳಿಂದ ಕಾಲುವೆಗಳಿಂದ ಮತ್ತು ಕೆರೆಕಟ್ಟೆಗಳಿಂದ ಸುಮಾರು ೪.೫೨೯ ಹೆಕ್ಟೇರಷ್ಟು ಒಟ್ಟು ಎಲ್ಲಾ ಮೂಲಗಳಿಂದ ೧೧.೭೮೨ ಹೆಕ್ಟೇರಗಳೆಷ್ಟು ನೀರಾವರಿಯನ್ನು ಹೊಂದಿದೆ"[13] ಎಂದೂ ತಿಳಿದುಬರುತ್ತದೆ. ಈ ರೀತಿಯಾಗಿ ಈ ಪರಿಸರವು ಕಲ್ಯಾಣಿ ಚಾಲುಕ್ಯರಿಂದ ಇಂದಿನವರೆಗೆ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ತೊಗರಿ, ಕಡಲೆ, ಶೇಂಗಾ, ಸೂರ್ಯಕಾಂತಿ, ಭತ್ತಾ, ಸಜ್ಜೆ, ಜೋಳ, ಹೆಸರು ಮುಂತಾದ ಬೆಳೆಗಳನ್ನು ಬೆಳೆಯುವುದು ವೈಶಿಷ್ಟ್ಯತೆಯಾಗಿದೆ.

**ಅಡಿಟಿಪ್ಪಣಿಗಳು:**

೧. ಕೊಟ್ರೇಶ್ ಎಂ. ಕೋಟೆ ಕೊತ್ತಲುಗಳು : ಒಂದು ಅಧ್ಯಯನ, ೨೦೦೨, ಪು. ೧೮ ಮತ್ತು ೧೯.

೨. ಅದೇ., ಪು. ೧೯.

೩. ಅದೇ. ಪು. ೦೮.

೪. ಚನ್ನಬಸಪ್ಪ ಎಸ್. ಪಾಟೀಲ್, ಕರ್ನಾಟಕದ ಕೋಟೆಗಳು, ಸಂಪುಟ ೧, ಪು. ೧೩೦ ಮತ್ತು ೧೩೩.

೫. ಅದೇ., ಪು. ೧೩೩.

೬. ಕ್ಷೇತ್ರಕಾರ್ಯ (ಸಂದರ್ಶನ ರಘುನಾಥ ಕುಲಕರ್ಣಿ ೫೫), ಚಂಡ್ರಕಿ, ೧೨.೦೮.೨೦೦೯.

೭. ಕ್ಷೇತ್ರಕಾರ್ಯ (ಸಂದರ್ಶನ ಬಾಲಪ್ಪ ಹಾದಿಮನಿ ೩೫) ಗುರುಮಿಟ್‌ಕಲ್, ೧೩.೦೮.೨೦೦೯.

೮. ಕ್ಷೇತ್ರಕಾರ್ಯ (ಸಂದರ್ಶನ ರವಿನಾಯಕ್ ೨೯) ಬೋರ ಬಂಡಾ, ೧೩.೦೮.೨೦೦೯.

೯. ವಾಸುದೇವನ್ ಸಿ.ಎಸ್; ಹಂಪಿ ಪರಿಸರದ ಕೆರೆಗಳು, ಪುಟ–೧೯

೧೦. ಅದೇ, ಪುಟ–೪

೧೧. ಜಿ.ಎಸ್. ದೀಕ್ಷಿತ ಮತ್ತು ಇತರರು; ಕರ್ನಾಟಕ ಕೆರೆ, ನೀರಾವರಿ, ಪುಟ–೩೩

೧೨. ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್, ಪುಟ–೨೦೩.

## ಸಮಾರೋಪ

ಇತಿಹಾಸ ಮತ್ತು ಪುರಾತತ್ವ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಲವಾರು ಅವಶೇಷಗಳನ್ನು ಹೊಂದಿರುವ ಯಾದಗಿರಿ ಪರಿಸರವು ತುಂಬಾ ವಿಶಾಲವಾಗಿದ್ದು ಯಾದಗಿರಿ ಪರಸರದ ಚರಿತ್ರೆ ಮತ್ತು ಪುರಾತತ್ವ ಈ ವಿಷಯ ತುಂಬಾ ವಿಶಾಲವಾದದು ಈ ಪರಿಸರವು ಎಂಟು ಹೋಬಳಿಗಳು ಮತ್ತು ೧೪೪ ಹಳ್ಳಿಗಳನ್ನು ಒಳಗೊಂಡಿದ್ದು ಅಧ್ಯಯನವನ್ನು ಕ್ರಮಬದ್ಧವಾಗಿ ಮಾಡುವುದಕ್ಕೆ ಯಾದಗಿರಿ ಮತ್ತು ಗುರುಮಿಟಕಲ್ ಎರಡು ಹೋಬಳಿಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ.

ಕಲಬುರ್ಗಿ ಜಿಲ್ಲೆಯಲ್ಲಿಯೇ ಯಾದಗಿರಿ ಒಂದು ದೊಡ್ಡ ತಾಲ್ಲೂಕು. ಈ ಪರಿಸರವು ತನ್ನದೇ ಆದ ಭವ್ಯ ಪರಂಪರೆ ಹೊಂದಿದೆ. ಇಂತಹ ವಿಶಿಷ್ಟವಾದ ಸಂಸ್ಕೃತಿಯ ಪರಂಪರೆಯನ್ನು ಹೊಂದಿರುವ ಯಾದಗಿರಿ ಪ್ರದೇಶದ ಸಮಗ್ರ ಅಧ್ಯಯನ ವ್ಯವಸ್ಥಿತವಾಗಿ ಇದುವರೆಗೆ ನಡೆದಿಲ್ಲವೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಯಾದಗಿರಿಯ ಪರಿಸರದ ಚರಿತ್ರೆ ಮತ್ತು ಪುರಾತತ್ವ ಅಧ್ಯಯನವು ಅವಶ್ಯಕತೆಯನ್ನು ಮನಗಂಡು ಅಧ್ಯಯನ ನಡೆಸಲು ಪೂರಕವಾದ ಆಕರ ಸಾಮಗ್ರಿಗಳಾದ ಶಾಸನಗಳು ಸ್ಮಾರಕಗಳು, ದೇವಾಲಯಗಳನ್ನು ಬಳಸಿಕೊಂಡು ಅಧ್ಯಯನದ ಶಿಸ್ತಿಗೆ ಒಳಪಡಿಸಲಾಗಿದೆ.

ಯಾದಗಿರಿ ಪರಿಸರವು ಭೀಮಾ ನದಿಯ ದಡಕ್ಕೆ ಇರುವುದರಿಂದ ಪ್ರಾಚೀನ ಕಾಲದ ಶಿಲಾಯುಗ ಸಂಸ್ಕೃತಿಯ ತಾಣವಾಗಿತ್ತು ಎಂದೂ ಇಲ್ಲಿ ದೊರೆತಿರುವ ಅವಶೇಷಗಳಿಂದ ತಿಳಿದುಬರುತ್ತದೆ. ಯಾದಗಿರಿ ಪರಿಸರವು ಗತಕಾಲದ ವೈಭವವನ್ನು ತನ್ನ ಕಾಲಗರ್ಭದಲ್ಲಿ ಉಳಿಸಿಕೊಂಡು ಬಂದಿದೆ. ಇಲ್ಲಿನ ಭೌಗೋಳಿಕದಿಂದ ಹಿಡಿದು ಜನಜೀವನದವರೆಗೂ ಇದರ ವ್ಯಾಪ್ತಿ ವಿಶಾಲವಾಗಿ ಹಬ್ಬಿದೆ. ಈ ನಾಡು ರಾಜಕೀಯ ನೆಲೆಗಳ ಜೊತೆಗೆ ಸಾಂಸ್ಕೃತಿಕ ಮತ್ತು ಚಾರಿತ್ರಿಕ ವಿಶೇಷತೆಗಳಿಂದ ಕೂಡಿದುದ್ದಾಗಿದೆ. ಪ್ರಾಚೀನ ಸಂಸ್ಕೃತಿಯಿಂದ ಹಿಡಿದುಕೊಂಡು ಹೈದ್ರಾಬಾದಿನ ನಿಜಾಮನ ಆಡಳಿತದ ಕ್ರಿ.ಶ. ೧೯೪೭ರವರೆಗೆ ಆಳ್ವಿಕೆಯ ತನ್ನ ತನವನ್ನು ಉಳಿಸಿಬೆಳೆಸಿಕೊಂಡು ಬಂದಿದೆ. ಇಂತಹ ಜನರು ಬದುಕಿ ಬಾಳಿದ ಮೂಲ ಸ್ವರೂಪ ಸಂಸ್ಕೃತಿ ನೋಡುವುದು ಅವಶ್ಯವೆನಿಸಿದೆ. ಈ ಪರಿಸರದಲ್ಲಿ ವಿಶೇಷವಾಗಿ ಸಾಮಾಜಿಕ, ಧಾರ್ಮಿಕ,

ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮಾಡಿದ ಸಾಧನೆ, ಸುಧಾರಣೆಗಳ ಮೇಲೆ ಹೊಸ ಬೆಳಕು ಚೆಲ್ಲುತ್ತದೆ. ಈ ದಿಸೆಯಲ್ಲಿ ಅಧ್ಯಯನ ಮಾಡುವುದು ಕಿರು ಪ್ರಬಂಧದ ಉದ್ದೇಶವಾಗಿದೆ. ಯಾದಗಿರಿ ಪರಿಸರವನ್ನು ಕುರಿತು ಅಧ್ಯಯನ ಮಾಡಬೇಕಾದರೆ ನಮಗೆ ಮೂಲ ಆಕರಗಳು ಅವಶ್ಯಕವೆನಿಸುತ್ತವೆ. ಆಗ ನಾವು ಐತಿಹಾಸಿಕ ಆಧಾರಗಳಾದ ಶಾಸನಗಳು, ಸ್ಮಾರಕಗಳು ಮತ್ತು ದೇವಾಲಯಗಳು ಹಾಗೂ ಐತಿಹ್ಯಗಳನ್ನು ಪಡೆದುಕೊಂಡು ಯಾದಗಿರಿಯ ಚಾರಿತ್ರಿಕ ಇತಿಹಾಸವನ್ನು ಭೌಗೋಳಿಕ ಅಂಶದೊಂದಿಗೆ ಗಮನಿಸಿ ಇಲ್ಲಿನ ನೆಲ ಜಲದ ಮತ್ತು ಐತಿಹಾಸಿಕ ಘಟನೆಯೊಂದಿಗೆ ಈ ಭಾಗದ ಚಾರಿತ್ರಿಕ ಅಂಶವನ್ನು ನೋಡುತ್ತೇವೆ. ಆ ದಿಸೆಯಲ್ಲಿ ಯಾದಗಿರಿ ಭೂ ಪ್ರದೇಶದ ಮೇಲ್ಮೈ ಲಕ್ಷಣಗಳ ಜೊತೆಗೆ ಪರಿಸರದ ದೇವಾಲಯಗಳು, ಮೂರ್ತಿಶಿಲ್ಪಗಳು, ಕೋಟೆಗಳು, ಕೆರೆಗಳು ಮತ್ತು ಸ್ಮಾರಕಗಳು ಮಠಮಾನ್ಯಗಳು ಪೌರಾಣಿಕ ಹಿನ್ನೆಲೆಯಲ್ಲಿ ಎಲ್ಲಾ ಚಾರಿತ್ರಿಕ ಅಂಶಗಳನ್ನು ಇಲ್ಲಿ ಎತ್ತಿ ಹೇಳಲಾಗಿದೆ.

ಯಾದಗಿರಿ ಚರಿತ್ರೆಯನ್ನು ನಾವು ಐತಿಹಾಸಿಕ ಆಧಾರಗಳಾದ ಶಾಸನಗಳನ್ನು ಬಳಸಿಕೊಂಡು ನೋಡುತ್ತೇವೆ. ಶಾಸನಗಳಲ್ಲಿ ಯಾದಗಿರಿ ಪಟ್ಟಣ ನಗರ ಪುರವೆಂದು ಎಲ್ಲೂ ಕಂಡುಬಂದಿಲ್ಲ. ಆದರೆ 'ಏತಗಿರಿ ಎಂದು ಬಂದಿರುವುದು ಸ್ಪಷ್ಟವಾಗಿದೆ. ಏತಗಿರಿ ಕಲ್ಯಾಣ ಚಾಲುಕ್ಯ ಅರಸ ಜಯಸಿಂಹನ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ.

ಇದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಯಾದಗಿರಿಯೆಂದೆ ಹೆಸರಾದ ಐತಿಹಾಸಿಕ ಮತ್ತು ರಾಜಕೀಯ ನೆಲೆಯಾಗಿರಬೇಕು. ಶಾಸನ ಆಧಾರಗಳಿಂದ ಈ ಭಾಗದ ರಾಜರ ಆಳ್ವಿಕೆಯ ಕಾಲವನ್ನು ಗುರುತಿಸಲಾಗಿದೆ. ಶಾಸನಾಧ್ಯಯನದಿಂದ ಇಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳು ನಮಗೆ ಗೋಚರಿಸುತ್ತವೆ. ಅವುಗಳನ್ನು ಇಲ್ಲಿ ವಿವರಿಸಲಾಗಿದೆ. ಯಾದಗಿರಿ ಪರಿಸರವು ತನ್ನದೆ ಆದ ಐತಿಹಾಸಿಕ ಪರಂಪರೆಯನ್ನು ಹೊಂದಿದ್ದು ಈ ಭಾಗದ ವೈಶಿಷ್ಟ್ಯವಾಗಿದೆ. ಈ ಭಾಗವು ಪ್ರಾಚೀನ ಕರ್ನಾಟಕವನ್ನು ಆಳ್ವಿಕೆ ಮಾಡಿದ ಕೆಲವು ಮನೆತನಗಳು ಪರೋಕ್ಷವಾಗಿ ಇಲ್ಲಿ ಆಡಳಿತ ಮಾಡಿದವು. ಆದರೆ ಈ ಪರಿಸರದಲ್ಲಿ ನೇರವಾಗಿ ಆಡಳಿತ ಮಾಡಿದ ರಾಜಕೀಯ ಮನೆತನವೆಂದರೆ ಕಲ್ಯಾಣಿ ಚಾಲುಕ್ಯ ಅರಸರು ಈ ಅರಸು ಮನೆತನದ ಒಂದನೆಯ ಸೋಮೇಶ್ವರ ಎರಡನೆಯ ಜಯಸಿಂಹ ಆರನೆಯ ವಿಕ್ರಮಾದಿತ್ಯ ಈತನ ಮಗ ಇರಿವಬೆಡಗು ಸತ್ಯಾಶ್ರಯ ಮಲ್ಲಿಕಾರ್ಜುನ. ಈ ಅರಸನ ಕಾಲದ ಮಹಾಸಾಮಂತರು, ದಂಡನಾಯಕರು ನಂತರ ಬಹುಮನಿ ಸುಲ್ತಾನರು ವಿಜಾಪುರದ ಆದಿಲ್ ಶಾಹಿಗಳು, ವಿಜಯನಗರದ ಅರಸರು, ಹೈದ್ರಾಬಾದಿನ ನಿಜಾಮರು ಮುಂತಾದವರನ್ನು ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಈ ನಾಡಿನಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ಅರಸರು ತಮ್ಮದೇ ಆದ ಭದ್ರವಾದ ನೆಲೆಯೂರಿ ತಮ್ಮತನವನ್ನು ಮೆರೆದಿದ್ದಾರೆ. ಅವರು ಆಳ್ವಿಕೆ ಮಾಡುವ ಸಂದರ್ಭದಲ್ಲಿ ಈ ನೆಲದಲ್ಲಿ ಅನ್ಯಭಾಷಿಕ ಮತೀಯ ರಾಜರುಗಳು ಬಂದು ನೆಲೆಯೂರಿದರು. ಈ ನಾಡಿನಲ್ಲಿ ಕಾಕಲುವಾರು ದೊರೆಗಳು, ಕಲ್ಯಾಣದ ಕಲಚೂರಿಗಳು ಮುಸ್ಲಿಂ ದೊರೆಗಳು ಆಳ್ವಿಕೆ ಮಾಡಿದವು.

ಯಾದಗಿರಿ ಪರಿಸರವು ಪ್ರಾಚೀನ ಆಡಳಿತ ಮಾಡಿದ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಆಳ್ವಿಕೆಗೆ ಒಳಪಟ್ಟರುವುದರಿಂದ ಅಮೃತ ಲಿಂಗೇಶ್ವರ ದೇವಾಲಯ, ಜೈನ ಬಸದಿಗಳು ಮತ್ತು ಯರಗೋಳ ಗ್ರಾಮದ ತ್ರಿಕೂಟ ದೇವಾಲಯ ಕಾಕಲುವಾರು ಸಂಸ್ಥಾನದ ದೊರೆಗಳಿಂದ ನಿರ್ಮಿಸಿದ ಕೆಲವು ದೇವಾಲಯಗಳು ಈ ಎಲ್ಲ ದೇವಾಲಯಗಳ ಮೂರ್ತಿ ಶಿಲ್ಪಗಳು ಹಾಗೂ ಯಾದಗಿರಿ ಚರಿತ್ರೆಯನ್ನು ಅರಿಯಬೇಕಾದರೆ ಶಾಸನಗಳು ಎಲ್ಲ ಅಂಶಗಳನ್ನು ಯಾದಗಿರಿ ಪರಿಸರದ ದೇವಾಲಯ ಎಂಬ ಅಧ್ಯಯನದಲ್ಲಿ ಪ್ರಸ್ತುತ ಪಡಿಸಲಾದ ಯಾದಗಿರಿ ಪರಿಸರವು ಏಳುಸುತ್ತಿನ ಕೋಟೆಯನ್ನು ಹೊಂದಿದ್ದು ಪ್ರಾಚೀನ ಕಾಲದಲ್ಲಿ ಅರಸರ ಕೋಟೆಗಳನ್ನು ತಮ್ಮ ರಕ್ಷಣೆ ಹಿನ್ನೆಲೆಯಲ್ಲಿ ನಿರ್ಮಾಣ ಮಾಡುಸುತ್ತಿದ್ದರು. ಕೋಟೆಗಳು ರಾಜಧಾನಿಯ ಗಿರಿಸೀಮೆಯಾಗಿದ್ದವು. ಆದ್ದರಿಂದ ಈ ಪರಿಸರದ ಗಿರಿದುರ್ಗದ ಸುತ್ತಲೂ ಕೋಟೆಗಳನ್ನು ನಿರ್ಮಿಸಲಾಗಿದೆ. ಹಾಗೆ ಗುರುಮಿಠಕಲ್ ಎಂಬ ಹೋಬಳಿಯಲ್ಲಿ ಕಾಕಲುವಾರು ದೊರೆಗಳು ಕ್ರಿ.ಶ. ೧೧ರಿಂದ ೧೨ನೇ ಶತಮಾನದವರೆಗೆ ಚಂಡ್ರಕಿ ಮತ್ತು ಗುರುಮಿಠಕಲ್ ಎಂಬ ಗ್ರಾಮಗಳಲ್ಲಿ ಮಣ್ಣಿನ ಕೋಟೆಯನ್ನು ಯುದ್ಧ ಮಾಡುವುದಕ್ಕೆ ನಿರ್ಮಿಸಲಾಗಿದೆ. ಈ ಪರಿಸರದ ದೇವಾಲಯ ವಾಸ್ತುಶಿಲ್ಪ ಅಧ್ಯಯನದಲ್ಲಿ ವಿವರಿಸಲಾಗಿದೆ.

ಆರ್ಥಿಕ ವ್ಯವಸ್ಥೆ ಸ್ವರೂಪ ಮತ್ತು ವೈಶಿಷ್ಟ್ಯಗಳ ಬದಲಾಗುತ್ತಾ ಬಂದು ಅದು ಪರಿಸರದ ಸಂಸ್ಕೃತಿ ಮೇಲೆ ಬೀರಿದ ಪರಿಣಾಮಗಳನ್ನು ಕೃಷಿ ವ್ಯವಸ್ಥೆಯ ಮೂಲಕ ಯಾದಗಿರಿ ಪರಿಸರವು ಆರ್ಥಿಕ ವ್ಯವಸ್ಥೆಯನ್ನು ರೂಪಿಸುವ ಪ್ರಯತ್ನಗಳು ಯಶಸ್ಸು ಕಾಣಬಹುದಾಗಿದೆ. ಇಲ್ಲಿ ನೀರಾವರಿ ಯೋಜನೆಗಳು ಇರುವುದು ಮತ್ತು ಅನೇಕ ಕೆರೆಗಳು ನಿರ್ಮಿಸಿದನ್ನು ಕಾಣಬಹುದು. ಈ ಪರಿಸರವು ಕಲ್ಯಾಣಿ ಚಾಲುಕ್ಯರ ಅಧಿಕಾರ ಅವಧಿಯಲ್ಲಿ ನೀರಾವರಿಗೆ ಹೆಚ್ಚಿನ ಆಧ್ಯತೆ ನೀಡಿರುವುದರಿಂದ ಅನೇಕ ಕೆರೆಗಳು ನಿರ್ಮಾಣವಾಗಿದ್ದನ್ನು ಕಾಣುತ್ತೇವೆ. ಅದರಿಂದ ಈ ಪರಿಸರದ ರಕ್ಷಣಾ ವಾಸ್ತುಶಿಲ್ಪ ಮತ್ತು ನೀರಾವರಿ ವ್ಯವಸ್ಥೆ ಎಂಬ ಅಧ್ಯಯನದಲ್ಲಿ ಪ್ರಸ್ತುತಪಡಿಸಲಾಗಿದೆ.

ಒಟ್ಟಾರೆಯಾಗಿ ಯಾದಗಿರಿ ಪರಿಸರವು ಹತ್ತು ಹಲವು ವೈವಿಧ್ಯ ಪೂರ್ಣ ವೈಶಿಷ್ಟ್ಯಗಳನ್ನು ಹೊಂದಿದ್ದನ್ನು ನಾವು ಕಾಣುತ್ತೇವೆ. ಯಾದಗಿರಿ ಪರಿಸರದ ಚರಿತ್ರೆ ಮತ್ತು ಪುರಾತತ್ವ ಈ ಪರಿಸರದ ದೇವಾಲಯಗಳು ಮತ್ತು ಯಾದಗಿರಿ ಪರಿಸರದ ರಕ್ಷಣಾ ವಾಸ್ತುಶಿಲ್ಪ ಮತ್ತು

ನೀರಾವರಿ ವ್ಯವಸ್ಥೆ ಅಂಶಗಳನ್ನು ಅಧ್ಯಯನದ ಶಿಸ್ತಿನಲ್ಲಿ ಒಳಪಡಿಸಲಾಗಿದೆ. ಒಂದು ನಾಡಿನ ಚಾರಿತ್ರಿಕ ಅಧ್ಯಯನ ಮಹತ್ತರ ಹೊಣೆಗಾರಿಕೆಯಿಂದ ಕೂಡಿರುತ್ತದೆ. ಆ ಹೊಣೆಗಾರಿಕೆಯ ಪರಿಮಿತಿಯಲ್ಲಿ ಅಧ್ಯಯನ ಕೈಗೊಳ್ಳಲು ಪ್ರಯತ್ನಿಸಲಾಗಿದೆ. ಈ ನಾಡು ಚಾರಿತ್ರಿಕವಾಗಿ ಸಮೃದ್ಧಿಯನ್ನು ಹೊಂದಿತ್ತೆಂಬುದು ಅಧ್ಯಯನದಿಂದ ವಿಧಿತವಾಗಿರುತ್ತದೆ.

## ಗ್ರಂಥಋಣ


೧. ಅಪರ್ಣಾ ಕೂ.ಸ. ದೇವಾಲಯ ವಾಸ್ತುಶಿಲ್ಪ ಪರಿಚಯ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨. ಅಪ್ಪದೊರೆ ಎಂ; 'ಎಕನಾಮಿ ಕಂಡಿಷನ್ ಇನ್ ಸೌಥರ್ನ್ ಇಂಡಿಯಾ'; ಮದ್ರಾಸ್, ೧೯೫೬.

೩. ಅಮರೇಶ ನುಗಡೋಣಿ; ರಾಯಚೂರು ಜಿಲ್ಲೆಯ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳುವಳಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೪. ಅಕ್ಕಿ ಡಿ.ಎನ್; ದೀಪಾವಳಿ ವಿಶೇಷಾಂಕ; ಪ್ರಜಾವಾಣಿ, ೨೦೦೦.

೫. ಭಟ್‌ಸೂರಿ ಕೆ.ಜಿ; ಶಾಸನ ಅಧ್ಯಯನ, ಸಂಪು-೩, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬. ಬಸವರಾಜ ಕೆ.ಆರ್; ಹಿಸ್ಟರಿ ಆಂಡ್ ಕಲ್ಚರ್ ಆಫ್ ಕರ್ನಾಟಕ; ಚಾಲುಕ್ಯ ಪಬ್ಲಿಕೇಷನ್, ಧಾರವಾಡ, ೧೯೮೪.

೭. ಬಸವರಾಜ ಎನ್. ಅಕ್ಕಿ; ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ; ಸೋಮಶೇಖರ ಪ್ರಕಾಶನ, ಧಾರವಾಡ, ೨೦೦೪

೮. ಭೀಮರಾಯ ಲಿಂಗೇರಿ; ಯಾದಗಿರಿ ಒಂದು ಸಾಂಸ್ಕೃತಿಕ ಅಧ್ಯಯನ; (ಪಿಎಚ್.ಡಿ. ಮಹಾಪ್ರಬಂಧ) ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೯. ಬಸವರಾಜ ಸಬರದ; ಹೈದರಾಬಾದ ಕರ್ನಾಟಕದ ತತ್ವಪದಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೦. ಚೆನ್ನಬಸಪ್ಪ ಎಸ್. ಪಾಟೀಲ್; ಕರ್ನಾಟಕ ಕೋಟೆಗಳು, ಸಂಪುಟ-೧; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೧. ಚಂದ್ರಶೇಖರ್ ಟಿ.ಜಿ; ಮಧ್ಯಕಾಲೀನ ಭಾರತ ಇತಿಹಾಸ; ಪೂರ್ಣಚಂದ್ರ ಪ್ರಕಾಶನ, ಶಿವಮೊಗ್ಗ, ೨೦೦೨.

೧೨. ಚಿದಾನಂದಮೂರ್ತಿ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ; ಮೈಸೂರು ವಿಶ್ವವಿದ್ಯಾನಿಲಯ; ಮೈಸೂರು, ೧೯೭೯.

೧೩. ಧನವಂತ ಹಾಜವಗೋಳ; ಮುಳಗುಂದ ನಾಡು ಒಂದು ಅಧ್ಯಯನಪ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬.

೧೪. ಡಿ.ಬಿ.ನಾಯಕ; ಕಲಬುರ್ಗಿ ಜಿಲ್ಲಾ ದರ್ಶನ; ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬುರ್ಗಾ, ೨೦೦೫.

೧೫. ಗೋಪಾಲ ಆರ್. (ಸಂ); ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ೨೦೦೭.

೧೬. ಗುಲಬರ್ಗಾ ಜಿಲ್ಲಾ ಗ್ಯಾಸಟೀಯರ್; ಕರ್ನಾಟಕ ಸರ್ಕಾರ್; ಬೆಂಗಳೂರು, ೧೯೯೭.

೧೭. ಹನುಮಾಕ್ಷಿ ಗೋಗಿ; ಅನುಶಾಸನ; ಮಹಿಳಾ ಸಾಹಿತ್ಯಿಕಾ ಪ್ರಕಾಶನ, ನವನಗರ, ಹುಬ್ಬಳ್ಳಿ, ೨೦೦೨.

೧೮. ಹಂಪ ನಾಗರಾಜಯ್ಯ ಕರ್ನಾಟಕ ಮತ್ತು ಜೈನ ಧರ್ಮ; ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ೧೯೯೭

೧೯. ಹಂಪ ನಾಗರಾಜಯ್ಯ ಕೊಪ್ಪಳ ಶಾಸನಗಳು; ರತ್ನತ್ರಯ ಪ್ರಕಾಶನ, ಮೈಸೂರು, ೧೯೯೮.

೨೦. ಕನ್ನಡ ವಿಷಯ ವಿಶ್ವಕೋಶ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೭೯.

೨೧. ಲಕ್ಷ್ಮಣ ತೆಲಗಾವಿ; ಸ್ಥಳೀಯ ಚರಿತ್ರೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨೨. ಮಂಜುನಾಥ ಬೇವಿನಕಟ್ಟಿ; ಮೈಲಾರಲಿಂಗನ ಕಾವ್ಯ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೨೩. ಮಹಾಬಲೇಶ್ವರ ಬಿ.ಸಿ; ಹೈದ್ರಾಬಾದ್ ಕರ್ನಾಟಕದ ವಿಮೋಚನಾ ಚಳುವಳಿ; ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೮.

೨೪. ಪರಮಶಿವಮೂರ್ತಿ ಡಿ.ವಿ; ಕನ್ನಡ ಶಾಸನಶಿಲ್ಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೨೫. ಪಿ.ಬಿ.ದೇಸಾಯಿ; ಕರ್ನಾಟಕದ ಕಲಚೂರಿಗಳು; ಆಲೂರ ವೆಂಕಟರಾವ್ ಪ್ರಕಾಶನ; ೧೯೮೩.

೨೬. ಪಿ.ಬಿ.ದೇಸಾಯಿ; ಕನ್ನಡ ನಾಡಿನ ಚರಿತ್ರೆ, ಭಾಗ–೨; ಕನ್ನಡ ಸಾಹಿತ್ಯ ಪರಿಷತ್ತು; ಬೆಂಗಳೂರು, ೧೯೭೫.

೨೭. ರಮೇಶ ನಾಯಕ (ಸಂ); ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಮರುಚಿಂತನೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೪.

೨೮. ರಾಮಶೇಷನ್ (ಸಂ); ಕರ್ನಾಟಕ ಪುರಾತತ್ವ ಶೋಧ; ಶ್ರೀ ಲಕ್ಷ್ಮೀ ಪ್ರಕಾಶನ, ಶ್ರೀ ಲಕ್ಷ್ಮೀ ಪ್ರಕಾಶನ, ಶ್ರೀರಂಗಪಟ್ಟಣ, ೧೯೮೦.

೨೯. ರಾಜಶೇಖರ್ ಸಿ. (ಸಂ); ಕರ್ನಾಟಕ ಪುರಾತತ್ವ ಶೋಧ; ಶ್ರೀ ಲಕ್ಷ್ಮೀ ಪ್ರಕಾಶನ; ಶ್ರೀರಂಗಪಟ್ಟಣ, ೧೯೮೦.

೩೦. ರಮೇಶ ಕೃಷ್ಣನ್; ಕರ್ನಾಟಕದ ಕೋಟೆ ಕೊತ್ತಲಗಳು; ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು; ೧೯೮೦.

೩೧. ರಮಜಾನ್ ದರ್ಗಾ ವಿಚಾರ ಕ್ರಾಂತಿ ಬಸವಣ್ಣ ಚಳುವಳಿ; ಅಲ್ಲಮಪ್ರಭು ಪಾಟೀಲ್; ನೆಲೊಗಿ, ೨೦೦೩.

೩೨. ರವಿ ನಾಯ್ಕ್; ಯಾದಗಿರಿ ಪರಿಸರದ ಮೊಹರಂ ಪದಗಳ ಅನನ್ಯತೆ; ಎಂ.ಫಿಲ್ ಕಿರುಪ್ರಬಂಧ; (ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೩. ಶಿವತಾರಕ ಕೆ.ಬಿ; ಕರ್ನಾಟಕ ಪುರಾತತ್ವ ನೆಲೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೪. ಶೇಷಶಾಸ್ತ್ರೀ ಆರ್; ಶಾಸನ ಪರಿಚಯ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೨.

೩೫. ಶಿವರುದ್ರಪ್ಪ ಎಸ್. ಎನ್; ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ; ಪೌರಸ್ಯ ಪ್ರಕಾಶನ, ತಿಪಟೂರು, ಮೈಸೂರು, ೨೦೦೦

೩೬. ಸುಂದರ ಅ; ಕರ್ನಾಟಕದ ಚರಿತ್ರೆ ಸಂಪುಟ–೧; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೩೭. ಷೇಕ್ ಅಲಿ ಮತ್ತು ಸುಂದರ ಅ. (ಸಂ); ಕರ್ನಾಟಕದ ಚರಿತ್ರೆ ಸಂಪುಟ–೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೨.

೩೮. ಸೂರ್ಯನಾಥ ಕಾಮತ್ ಮತ್ತು ದೇವರಕೊಂಡಾರೆಡ್ಡಿ (ಸಂ); ಇತಿಹಾಸ ದರ್ಶನ ಸಂಪುಟ–೮; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೮೨.

೩೯. ಸುರೇಶ ಕೆ.ಎಂ. ಮತ್ತು ಇತರರು; ಕರ್ನಾಟಕ ದೇವಾಲಯ ಕೋಶ : ಕೊಪ್ಪಳ ಜಿಲ್ಲೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೪೦. ಸುಭಾಷ್ಚಂದ್ರ ಕೌಲಗಿ; ಕೂಡಲೂರು ಬಸವಲಿಂಗ ಶರಣರು; ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೮.

೪೧. ಶೀಲಾಕಾಂತ ಪತ್ತಾರ; ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೦.

೪೨. ತಿಪ್ಪೇರುದ್ರಸ್ವಾಮಿ ಎಚ್; ಕರ್ನಾಟಕ ಸಂಸ್ಕೃತಿ ಸಮೀಕ್ಷೆ; ಡಿ.ವಿ.ಕೆ ಮೂರ್ತಿ; ಮೈಸೂರು, ೧೯೪೮.

೪೩. ವಸು ಎಂ.ವಿ.; ಕರ್ನಾಟಕ ಚರಿತ್ರೆ; ದೂರಶಿಕ್ಷಣ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೪೪. ವಾಸುದೇವನ್ ಸಿ.ಎಸ್; ಹಂಪಿ ಪರಿಸರದ ಕೆರೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೪೫. ವಾಸುದೇವನ್ ಸಿ.ಎಸ್, ಮಹದೇವ ಸಿ ಮತ್ತು ರಮೇಶ ನಾಯಕ; ಕರ್ನಾಟಕ ದೇವಾಲಯ ಕೋಶ; ಹಾವೇರಿ ಜಿಲ್ಲೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೪೬. ವಾಸುದೇವನ್ ಬಡಿಗೇರ; ಕರ್ನಾಟಕ ದೇವಾಲಯ ಕೋಶ; ಬಿಜಾಪೂರ ಜಿಲ್ಲೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.



ಯಾದಗಿರಿ ಗಿರಿದುರ್ಗದ ಮೊದಲನೇಯ ಕೋಟೆ



ಗಿರಿದುರ್ಗದ ಮೇಲಿರುವ ತೋಪು



ಗಿರಿದುರ್ಗದ ಅರಮನೆಯ ಸಭಾಮಂಟಪ



ಯಾದಗಿರಿ ಕೆರೆಯ ನೀರಾವರಿ ವ್ಯವಸ್ಥೆಯ ತೂಬು



ಐತಿಹಾಸಿಕ ಯಾದಗಿರಿ ಕೆರೆ



ನವರಂಗ ಕಂಬದ ಮೇಲ್ಭಾಗ ಅಮೃತಲಿಂಗೇಶ್ವರ
ದೇವಾಲಯ ಯಾದಗಿರಿ



ಗಿರಿದುರ್ಗದ ಮೇಲಿರುವ ಏತಗಿರಿ ಶಾಸನ




ಗಿರಿದುರ್ಗದ ಮೇಲಿರುವ ಭುವನೇಶ್ವರಿ ಯಾದಗಿರಿ



ಗಿರಿದುರ್ಗದಲ್ಲಿನ ಜೈನ ತೀರ್ಥಂಕರುಗಳು ಉಬ್ಬುಚಿತ್ರಗಳು, ಯಾದಗಿರಿ



ಗಿರಿದುರ್ಗದಲ್ಲಿನ ಪಾತಳ ಬಾವಿ ಯಾದಗಿರಿ



ಗಾಜೂರ ಕೋಟ್ ದೇವಾಲಯದ ಮುಂದುಗಡೆ ಇರುವ ದೀಪಸ್ತಂಭ



ಯಾದಗಿರಿ ಪರಿಸರದ ಭೀಮಾನದಿ



ಮೈಲಾರಲಿಂಗೇಶ್ವರ ಗಿರಿದುರ್ಗ ಮೈಲಾಪುರ



ಗುರುಮಠಕಲ್ಲ ಮಣ್ಣಿನ ಕೋಟೆ



ಚಂದ್ರಿಕಿಗ್ರಾಮದ ಮಣ್ಣಿನ ಕೋಟೆ



ಮಲ್ಲಿಕಾರ್ಜುನ ದೇವಾಲಯ ಗಾಜೂರುಕೋಟ್



ಮಲ್ಲಿಕಾರ್ಜುನ ದೇವಾಲಯದ
ದ್ವಾರಪಾಲಕರು



ಮಲ್ಲಿಕಾರ್ಜುನ ದೇವಾಲಯದ
ಮೂರ್ತಿಶಿಲ್ಪಿ



ಮಲ್ಲಿಕಾರ್ಜುನ ದೇವಾಲಯದ
ಮೂರ್ತಿಶಿಲ್ಪಿ



ಮಲ್ಲಿಕಾರ್ಜುನ ದೇವಾಲಯದ
ಮೂರ್ತಿಶಿಲ್ಪಿ

## ಹೈದರಾಬಾದ್ ಕರ್ನಾಟಕ ನಕ್ಷೆ



